# ಆದರ್ಶದ ಆಡಂಬರ

(ಏಕಾಂಕ ಪ್ರಹಸನಗಳು)

ಶ್ರೀಮತಿ ಟಿ. ಸುನಂದಮ್ಮ

ವಿಜಯ ಸಾಹಿತ್ಯ

ಬೆಂಗಳೂರು ೨.

# ಮೊದಲ ಮಾತು

ಈ ಸಂಕಲನದಲ್ಲಿರುವ ಮೂರು ನಾಟಕಗಳಲ್ಲಿ 'ಆದರ್ಶದ ಆಡಂಬರ'ವು ಮಲ್ಲೇಶ್ವರದ ವೈ. ಎಮ್. ಎಮ್.ಎ. ಸಮಾರಂಭದಲ್ಲೂ, ಬಸವನಗುಡಿ ಸ್ತ್ರೀ ಸಂಘದಲ್ಲೂ ಅಭಿನಯಿಲ್ಪಟ್ಟಿವೆ. 'ಸಾಮೂಹಿಕ ಪಾಕಶಾಲೆ'ಯು ಮೈಸೂರು ರೇಡಿಯೋ ಕೇಂದ್ರದಿಂದ ಪ್ರಸಾರವಾಗಿದೆ. 'ದೀಪಾವಳಿ—ಧೂಪಾವಳಿ' ಸಹ ಎರಡು ಬಾರಿ ಪ್ರದರ್ಶಿತವಾಗಿದೆ. ಪ್ರೋತ್ಸಾಹಿಸಿದ ಈ ಎಲ್ಲ ಸಂಸ್ಥೆಗಳಿಗೂ, ನಾನು ಅತ್ಯಂತ ಕೃತಜ್ಞಳಾಗಿರುತ್ತೇನೆ.

'ಸಾಮೂಹಿಕ ಪಾಕಶಾಲೆ'ಯು ಹೆಚ್ಚಾಗಿ ಸ್ತ್ರೀ ಪಾತ್ರಗಳನ್ನೊಳಗೊಂಡಿರುವುದರಿಂದ, ಸ್ತ್ರೀ ಸಂಘಗಳಿಂದಲೂ, ವಿದ್ಯಾರ್ಥಿನಿಯರಿಂದಲೂ ಅಭಿನಯಿಸಲು ಯೋಗ್ಯವಾಗಿದೆ. ಮಿಕ್ಕೆರಡು ನಾಟಕಗಳು ಸರ್ವರಿಗೂ ಅಭಿನಯಿಸಲು ಸಾಧ್ಯವಾಗುತ್ತವೆ. 'ಆದರ್ಶದ ಆಡಂಬರ'ದಲ್ಲಿ ಸ್ತ್ರೀ ಪಾತ್ರಗಳು ಹೆಚ್ಚೆಂದು ತೋರಿದರೆ, ಸಭಿಕರಲ್ಲೂ, ಆನಂದಾದೇವಿಯನ್ನು ಭೇಟಿ ಮಾಡಲು ಬಂದವರಲ್ಲೂ, ಪುರುಷ ಪಾತ್ರಗಳನ್ನೇ ಹೆಚ್ಚಾಗಿ ಇಟ್ಟುಕೊಳ್ಳಬಹುದು.

ನಾಟಕವನ್ನು ಪ್ರಕಟಿಸಲು ಅನುಮತಿಯಿತ್ತುದಕ್ಕಾಗಿ ಆಲ್-ಇಂಡಿಯಾ ರೇಡಿಯೋದವರಿಗೂ, 'ಕೊರವಂಜಿ'ಯಲ್ಲಿ ನನ್ನಿಂದ ಪ್ರಕಟಿತವಾದ ಲೇಖನಗಳನ್ನು ಅಳವಡಿಸಿಕೊಂಡು ನಾಟಕರೂಪದಲ್ಲಿ ಪ್ರಕಾಶಿಸಲು ಅನುಮತಿಯಿತ್ತ 'ಕೊರವಂಜಿ' ಸಂಪಾದಕರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು.

ಮತ್ತು ಈ ಪುಸ್ತಕವನ್ನು ಪ್ರಕಟಿಸುವ ಹೊರೆಯನ್ನು ದಯಮಾಡಿ ಹೊತ್ತುದಕ್ಕಾಗಿ ಶ್ರೀಯುತ ಕೆ. ಎಸ್. ರಾಮಕೃಷ್ಣಮೂರ್ತಿಯವರಿಗೆ ನಾನು ಅತ್ಯಂತ ಕೃತಜ್ಞಳಾಗಿರುತ್ತೇನೆ.

ಬೆಂಗಳೂರು.
೧೫-೨-೫೧.

ಟಿ. ಸುನಂದಮ್ಮ.

# ಆದರ್ಶದ ಆಡಂಬರ



ಪಾತ್ರಗಳು :—

ಆನಂದಾದೇವಿ

ರಾಯರು—ಆನಂದಾದೇವಿಯ ಪತಿ

ಕಮಲು— ,, ಮಗಳು

ಅರಿಮೂರ್ತಿರಾಯರು—ಜಿಲ್ಲಾಧಿಕಾರಿ

ಶಾಂತಮ್ಮ ,, ಗಳ ಪತ್ನಿ

ಜವಹಿರ್<br>ಅಮೃತ ಕುವರಿ — ,, ಮಕ್ಕಳು

ನಿಂಗಿ, ಸಭಿಕರು, ನಾಲ್ಕಾರು ಮಹಿಳೆಯರು,........ಇತ್ಯಾದಿ.

# ಆದರ್ಶದ ಆಡಂಬರ

## ದೃಶ್ಯ ೧

[ಖಾದೀಸೀರೆಯನ್ನುಟ್ಟು ಆನಂದಾದೇವಿ ಭಾಷಣ ಮಾಡುತ್ತಿರುವಳು. ಸಭಿಕರು ತಲೆದೂಗುತ್ತ ಕೇಳುತ್ತಿರುವರು.]

**ಆನಂದಾದೇವಿ :** ಸೋದರಿಯರೇ, ಪ್ರತಿಯೊಂದರಲ್ಲೂ ಆದರ್ಶದ ಮೇಲ್ ಪಂಕ್ತಿಯನ್ನು ಅನುಸರಿಸಲು ಮರೆಯಬೇಡಿರಿ. ಪೂಜ್ಯ ಬಾಪೂಜಿ ಹಾಕಿಕೊಟ್ಟ, ತಾಯಿ ಕಸ್ತೂರಿ ಬಾ ತೋರಿಸಿಹೋದ, ಹೇಳಿಹೋದ ಆದರ್ಶವನ್ನು ಅವಲಂಬಿಸಿ. ಅದೇ ನಿಮ್ಮ ಹೆಗ್ಗುರಿಯಾಗಿರಲಿ! ಶಾಂತಿ, ಸತ್ಯ, ಅಹಿಂಸೆ ಮತ್ತು ಸಂಯಮಗಳ ಅಸ್ತ್ರವನ್ನು ತೊಡಿ. ಪ್ರಾಣಿಗಳಲ್ಲಿ ದಯೆಯಿಡಿ, ಸೇವಕ ಸೇವಕಿಯರನ್ನು ನಿಮ್ಮಂತೆ ಕಾಣಿರಿ. ಕ್ರೋಧವನ್ನು ತೊರೆಯಿರಿ; ಆಡಂಬರವನ್ನು ಮರೆಯಿರಿ!

ಅಕ್ಕ ತಂಗಿಯರೇ, ನಿಮ್ಮಿಂದ ನೆರವೇರಬೇಕಾದ ಕಾರ್ಯ ಹೊರೆ ಹೊರೆಯಾಗಿವೆ; ಕರ್ತವ್ಯ ಕಾದು ನಿಂತಿದೆ. ಮುಂಬರುವ ಪೀಳಿಗೆ—ಮಕ್ಕಳು—ಅವರನ್ನು ಸನ್ಮಾರ್ಗಗಾಮಿಗಳಾಗಿ ಮಾಡಿ! ಅವರ ಏಳಿಗೆಗೆ, ಅವರ ಪುರೋವೃದ್ಧಿಗೆ, ಪಣತೊಡಿ. ನಿಮ್ಮ ದೇಹವನ್ನೂ, ಆತ್ಮವನ್ನೂ ಮೀಸಲಾಗಿರಿಸಿರಿ. ಅದೇ ಸತ್ಯವಾದ ದೇಶಸೇವೆ, ನಾಡ ಹಿರಿಮೆ!

ಹಿರಿಯರೇ ಮತ್ತು ಕಿರಿಯರೇ, ಗೋಮಾತೆಯ ಸೇವೆ ಸಲ್ಲಿಸಿ. ದೇಶದ, ಅದರಲ್ಲೂ ಬಡ ಭಾರತದ, ಸಂಪತ್ತು ಗೋಮಾತೆ! ನಮ್ಮ ಜೀವನಾಧಾರಿ ಅವಳು, ಮಕ್ಕಳ ಪ್ರಾಣ ಪೋಷಕಳು ಅವಳು. ಅವಳ ಸೇವೆ ಸಲ್ಲಿಸಿ, ಅವಳ ಶಿಶ್ರೂಷೆಗೈಯಿರಿ; ಇಹ ಪರ ಗಳೆರಡರಲ್ಲೂ ನಿಮ್ಮ ಒಳಿತಾದೀತು!

ಮತ್ತು, ಸೋದರಿಯರೇ, ತಮ್ಮಲ್ಲೊಂದು ಬಿನ್ನಹ. ಕೈ ಜೋಡಿಸಿ ಕೇಳಿಕೊಳ್ಳುತ್ತೇನೆ, ಕಾಳಸಂತೆಯ ಕ್ರೂರ ರಕ್ಕಸನ ಕೈವಶವಾಗಬೇಡಿ. ಪುರುಷರ ಹೊರೆಯನ್ನು ಕಡಿಮೆಮಾಡಿ. 'ಘನಸರ್ಕಾರದವರಿತ್ತ ರೇಷನ್ ಪ್ರಮಾಣದಲ್ಲೇ ನಿರ್ವಹಿಸಿ. ಗೆಡ್ಡೆ ಗೆಣಸುಗಳನ್ನು ತಿಂದರೂ ಚಿಂತೆಯಿಲ್ಲ, ಕಾಳು ಬೇಳೆಗಳನ್ನು ಬೇಯಿಸಿ ಕವಳಿಸಬೇಕಾದರೂ ಲೇಸೇ; ಆದರೆ ಬ್ಲಾಕ್ ಮಾರ್ಕೆಟ್‌ನ, ಅಂದರೆ ಕಾಳಸಂತೆಯ ಘೋರ ಪಾಪಕ್ಕೆ ಮಾತ್ರ ಕೈಯಿಕ್ಕಬೇಡಿ! ಸ್ತ್ರೀ ಜಾತಿಗೇ ಅಪಮಾನವಾದ, ಅವನತಿಕಾರಕವಾದ ಕೃತ್ಯ ಅದು!

ಅಕ್ಕ ತಂಗಿಯರೇ, ನನ್ನ ನಾಲ್ಕು ಅಲ್ಪ ಮಾತುಗಳನ್ನು ಒಂದು ಕಿವಿಯಿಂದ ಕೇಳಿ ಮತ್ತೊಂದು ಕಿವಿಯಲ್ಲಿ ತೂರಿಬಿಡದೆ, ಕಾಲುಭಾಗವನ್ನಾದರೂ, ಕಾರ್ಯತಃ ಕೈಗೊಳ್ಳಬೇಕೆಂದು ಕೈಮುಗಿದು ಕೇಳಿಕೊಳ್ಳುತ್ತೇನೆ..........ಜೈ ಭಾರತ್! ಜೈ ಹಿಂದ್!

[ಸಭಿಕರು 'ಜೈ ಹಿಂದ್' ಎನ್ನುತ್ತ ಚಪ್ಪಾಳೆ ತಟ್ಟುವರು. ಆನಂದಾದೇವಿ 'ನಮಸ್ತೇ, ನಮಸ್ತೇ' ಎನ್ನುತ್ತಾ ಹೋಗುವಳು]

[ಸಭಿಕರಲ್ಲಿ]

**ಒಬ್ಬ ಮಹಿಳೆ:** ಏನ್ಸೊಗಸ್ಸಾಗಿತ್ರಿ ಭಾಷಣಾ! ಕೇಳ್ತಾಕೂತಿದ್ರೆ, ಕಣ್ಣ ರೆಪ್ಪೆ ಕೂಡ ಮಿಟಕಸ್ಬೇಕು ಅನ್ನಿಸಲ್ಲ!

**ಎರಡನೇ ಮಹಿಳೆ:** ಎಷ್ಟು ಚೆನ್ನಾಗಿ ಮಾತಾಡ್ತಾರಮ್ಮ ಈ ಆನಂದಾದೇವಿ! ತ್ಚು ತ್ಚು ತ್ಚು ತ್ಚು! ಏನು ಸ್ಫೂರ್ತಿ? ಏನ್ಕಥೆ! ಆದರ್ಶ ಮಹಿಳೆಯಮ್ಮ ಆಕೆ, ನಿಜವಾಗ್ಲೂ ಆದರ್ಶ ಮಹಾತಾಯಿ!

**ಮೂರನೇ ಮಹಿಳೆ:** ಅಲ್ಲ ಕಣ್ರೀ, ಇಷ್ಟು ವಿವೇಚನೆಯಾಗಿರೋ ಹೆಂಗ್ಸು, ಮನೇ ಸಂಸಾರ ಇನ್ನೆಷ್ಟು ವಿತರಣೆಯಾಗಿ ನಿರ್ವಹಿಸುತ್ತಾಳೋ

ಅಂತೀನಿ! ನಿಜವಾಗಿಯೂ ಈಕೇನ ಕೈಹಿಡಿದಿರೋ ಆ ಮಹರಾಯ್ನೂ, ಹೊಟ್ಟೇಲಿ ಹುಟ್ಟಿರೋ ಮಕ್ಳೂ ಪುಣ್ಯವಂತರು!

**ಎಲ್ಲರೂ:** ಅಲ್ವೇ! ಅದರಲ್ಲೇನು ಅನುಮಾನ! (ಇತ್ಯಾದಿ ಮಾತನಾಡಿಕೊಳ್ಳುತ್ತಾ ಹೋಗುವರು.)

## ದೃಶ್ಯ ೨

[ಆನಂದಾ ದೇವಿಯ ಮನೆ. ಆಕೆಯ ಪತಿ ಕುರ್ಚಿಯ ಮೇಲೆ ಕುಳಿತು ಪೇಪರು ಓದುತ್ತಿರುವರು. ಪೇಪರು ಮರೆಯಲ್ಲಿ ಆತ ಕಾಣುವುದಿಲ್ಲ. ಮತ್ತು ಪೇಪರು ನಿಶ್ಚಲವಾಗಿರುತ್ತದೆ. ಆನಂದಾದೇವಿ ಥಳ್ಳನೆ, ನಾಜೂಕಾದ ಸೀರೆಯನ್ನುಟ್ಟು, ಆಗತಾನೇ ಬಿಚ್ಚಿದ್ದ ಖಾದಿ ಸೀರೆಯನ್ನು ಮಡಿಸುತ್ತಿರುವಳು. ತೆರೆ ತೆಗೆದೊಡನೆಯೇ ಅದನ್ನು ನೇಪಥ್ಯದ ಕಡೆ ಎಸೆಯುವಳು. ರಂಗದ ಮೇಲೆ ಎರಡು ಮೂರು ಕುರ್ಚಿಗಳು, ಒಂದು ಮೇಜು ಅಸ್ತವ್ಯಸ್ತವಾಗಿ ಇಡಲ್ಪಟ್ಟಿವೆ. ಬಟ್ಟೆ ಬರೆಗಳೂ, ಕಾಗದದ ಚೂರುಗಳೂ ಎಲ್ಲೆಲ್ಲೂ ಬಿದ್ದಿವೆ.......]

**ಆನಂದಾದೇವಿ:** ಸಧ್ಯ ತೊಲಗ್ತಪ್ಪ ಈ ಹಾಳ್ಬಟ್ಟೆ! ಏನ್ಹಣೇಬರವೋ ಈ ಗಾಢಾ ಬಟ್ಟೆ ಸುತ್ಕೊಂಡು ಸಾಯೋದು! (ಕುರ್ಚಿಯೊಂದರಲ್ಲಿ ಕುಳಿತು ಸುತ್ತಲೂ ನೋಡಿ) ಈ ಮನೇ ಇರೋ ಲಕ್ಷಣವೋ! ಹುಲೀ ಹೊಕ್ಕ ಹಟ್ಟೀ ಇದ್ಹಾಗಿದೆ! (ಎದ್ದು ನೇಪಥ್ಯದ ಕಡೆ ತಿರುಗಿ) ನಿಂಗೀ, ಲೇ ನಿಂಗೀ!

**ನಿಂಗಿ:** ('ಬಂದೇ ಕನ್ರವ್ವಾ' ಎನ್ನುತ್ತಾ ಪ್ರವೇಶಿಸಿ) ಏನ್ರವ್ವಾ?

**ಆ:** ಅಲ್ವೇ, ಇದೇನೇ ನೀನಿಟ್ಟಿರೋ ಲಕ್ಷಣಾ ಮನೇನ? ಮೂರ್ತಲೆ ಮಾರ್ನಿಂದ ಕೂಡಿಕ್ಕಿರೋ ಹಾಗಿದೆ ಕಸಾನ!

**ನಿಂ:** ಇಲ್ರವ್ವಾ........ಗುಡ್ಸಿದ್ದೀನ್ರವ್ವಾ ಒತಾರೇ........

**ಆ:** ಇಲ್ರವ್ವಾನೂ ಇಲ್ಲ, ಇಪ್ರವ್ವಾನೂ ಇಲ್ಲ. ಗುಡ್ಸಿವ್ಳಂತೆ! ಗುಡ್ಸಿದ್ಮನೆ ಯೇನೇ ಇದು? ಈ ಧೂಳ್ನೋಡು, ಈ ಕೊಳಕ್ನೋಡು!

**ನಿಂ:** ನಾಯೆಲ್ಲ ಗುಡ್ಸೇ ಇಪ್ದೆ ಕಣ್ರವ್ವಾ. ಎಲ್ನೋ ಉಡುಗ್ರು............

**ಆ:** ಹೂಂ! ಹುಡುಗರ್ಮೇಲೆ ಹೊರಸ್ತೀಯಾ ತಪ್ನ?

**ನಿಂ:** ಔದ್ಕನ್ರವ್ವಾ, ಕಿಟ್ಟಪ್ನೋರೂವೆ ಲೀನಪ್........

**ಆ:** ಹೆಚ್ಮಾತಾಡಿದ್ರೆ ಹಲ್ಲುದುರುಸ್ಬಿಡ್ತೀನಿ ನೋಡು ಕತ್ತೆ! ತನ್ನ ಕೆಲಸದ ವೈಸಕ್ಕೆ ........! (ಹೊಡೆಯಲು ಹೋಗುವಳು. ನಿಂಗಿ ಬೆದರುವಳು) .... ಅಲ್ವೇ ಹಾಲು ಕೊಡ್ತೀನೆ ಹಸು ಇವತ್ತಾದ್ರೂ?

**ನಿಂ:** (ಹೆದರುತ್ತ) ಇಲ್ರವ್ವಾ........ಸರಾನೇ ಬಿಡಾಕಿಲ್ಲ ಯಾನಕ್ನೋ!.... ಕೈಯಿಕ್ಕಾಕೋದ್ರೆ ಝಾಡ್ಸಿ ಒದೀತದೆ............

**ಆ:** ಅಯ್ಯೋ ಪ್ರಾರಬ್ಧವೇ! ಇದಕ್ಕೇನ್ಬಂತು ದೊಡ್ರೋಗ? ಇನ್ನೂರು ರೂಪಾಯಿ ಇಕ್ಕಿದ್ನಲ್ಲಾ ಈ ಶನೀಗೆ! ಹಾಲು ಕೊಡಕ್ಕೇ ಸಾಯುತ್ತೆ. ........ಲೇ ನಿಂಗೀ, ಹೋಗಿ ಬಲವಾಗಿ ಕಾಲ್ಕಟ್ಹಾಕಿ ಕರೀಹೊಗು. ........(ನಿಂಗೀ ಹೋಗುತ್ತಿರಲು) ನಿಂಗೀ, ಇಲ್ಲಿ ಬಾ!

**ನಿಂ:** ಏನ್ರವ್ವಾ?

**ಆ:** ಇಲ್ನೋಡು; ಅದೇನಾದ್ರೂ ಇವತ್ತು ಹಾಲ್ಕೊಡ್ಲಿಲ್ಲ ಸರಿ. ಇಲ್ದೇ ಹೋದ್ರೆ ಹಿಂಡಿ ಗಿಂಡಿ ಎಲ್ಲಾ ವಜಾ ನಾಳೆಯಿಂದ! ಹೊಟ್ಟೇಗ್ಯಾಕೆ ಪುಗಸಟ್ಟೆ ದಂಡ! ಬೀದಿ ಹುಲ್ಲು, ನಲ್ಲೀ ನೀರ್ನಲ್ಲಿ ನೆಗೆದ್ಹೋಗ್ಲಿ ಶನಿ! ತಿಳೀತೋ? (ನಿಂಗಿ 'ಆಗಲ್ರವ್ವಾ, ತಿಳೀತ್ರವ್ವಾ' ಎನ್ನುತ್ತಾ ಹೋಗುವಳು) ಒಳ್ಳೆ ಪ್ರಾರಬ್ಧ ಸಹವಾಸ ಆಯ್ತು ........(ಕೂತುಕೊಳ್ಳುತ್ತ) ಅಬ್ಬ! ಅರಚೀ ಅರಚೀ ಹೊಟ್ಟೆ ತಾಳ ಹಾಕ್ತಾಯಿದೆ. ಬೆಳಗ್ನಿಂದ ಮೂರ್ಕಡೆ ಒರಲಿದ್ದಾಯ್ತು ಭಾಷಣಾನ! ನರವಿಲ್ಲದ ನಾಲ್ಗೆ ನರಳ್ದಿದ್ರೂ, ನರವಿರೊ ಹೊಟ್ಟೆ ನರಳ್ತಾ ಇದೆ! (ನೇಪಥ್ಯದ ಕಡೆ ತಿರುಗಿ) ಕಮ್ಲೂ, ಕಮ್ಲೂ!

**ಕಮಲು:** ("ಬಂದೇವಮ್ಮಾ" ಎನ್ನುತ್ತಾ ಪ್ರವೇಶಿಸಿ) ಕರೆದ್ಯೇನಮ್ಮಾ?

**ಆ:** ಹೂಂ, ಕರ್ದೆ....ಅಡಿಗೆ ಆಯ್ತೇ?

**ಕ:** ಇನ್ನೂ ಇಲ್ಲಮ್ಮ. ಜೇಳೆ ಹಾಕಿದೀನಿ........ಅಕ್ಕಿ........ಒಂದ್ಕಾಳಿಲ್ಲ ಡಬ್ಬದಲ್ಲಿ........

**ಆ:** ಅಕ್ಕಿ ಇಲ್ಲ! ಈ ವಾರದ ರೇಷನ್ನೇನಾಯ್ತು?

**ಕ:** ಎಲ್ಲಿದ್ಯಮ್ಮ? ರಾತ್ರೀನೇ ಸಾಕ್ಸಾಲ್ದಾಗಿತ್ತು. ಹುಡುಗರ್ಗೂ, ಅಪ್ಪನಿಗೂ ಬಡಿಸಿ, ನೀನು ಅದೇ 'ಆಹಾರ ಮಿಗತಾಯ ಸಮಿತಿ' ಮೀಟಿಂಗ್‌ಗೆ ಹೋಗಿದ್ಯಲ್ಲ, ನಿನಗೆ ಸಾಲದೆ ಬಂದೀತು ಅಂತ ಮಿಕ್ಕದ್ದು ಮುಚ್ಚಿಟ್ಟು, ನಾನು ಹಾಗೇ ಮಲಕ್ಕೊಂಡೆ.

**ಆ:** ಅಯ್ಯೋ, ಉಪವಾಸ ಮಲಕ್ಕೊಂಡ್ಯಾ?........ಚೆನ್ನಾಯ್ತು! ಅಕ್ಕಿ ಇಲ್ಲಾಂತ ಉಪವಾಸ ಇರಕ್ಕಾಗುತ್ಯೇ?.... (ಕೈಚೀಲ ತೆಗೆದು) ತೊಗೋ ....ಸಿಂಗೀನ ಕಳ್ಸು. (ಮೆಲ್ಲನೆ) ಅರಸಣ್ಣನ ಮನೇಲಿ ಎರಡ್ಸೇರಕ್ಕಿ ತೆಗೆದ್ಕೊಂಡು ಬಾನ್ಸು....ಹಿತ್ತಲ ಬಾಗ್ಲಲ್ಲಿ ಹೋಗಿ, ನಾನ್ಕಳಿಸ್ದೇಂತ ಕೇಳೂನ್ನು. ಮೂರುಸಾಯಿಪ್ಪೆ, ಎರಡ್ಸೇರು ಕೊಡ್ತಾನೆ....ಊಂ? ("ಆಗ್ಲಮ್ಮ" ಎನ್ನುತ್ತ ಕಮಲ ಹೋಗುವಳು)......

ಉಶ್........ಸಾಕಪ್ಪ ಸಾಕು ಈ ಸಂಸಾರ!....ಉಶ್....ಈ ಜಡಭರತ ಮಹಾರಾಯ್ರು ಎಲ್ಲಿ ಹಾಳಾಗ್ಹೋದ್ರೋ?

**ರಾಯರು:** (ಮರೆಯಾಗಿದ್ದ ಪೇಪರನ್ನು ಕೆಳಗಿಡುತ್ತಾ, ಮೂಗಿನಮೇಲೇಳಿದ್ದ ಕನ್ನಡಕ ಮೇಲೆತ್ತುತ್ತ) ಜಡಭರತ, ಇಲ್ಲೇ ಕುರ್ಚಿ ಭರತಿ ಆಗಿದ್ದಾನೆ!

**ಆ:** (ಬೆಚ್ಚಿ) ಇದೇನು? ನೀವಿಲ್ಲೇ ಕುಕ್ಕರ್ಬಡ್ಕೊಂಡಿದೀರಾ ಅಷ್ಟು ಹೊತ್ನಿಂದ?

**ರಾ:** ಹುಂ....ಕು-ಕ್ಕ-ರ್ಬ-ಡ್ಡಿ-ದೀನೀ, ಎಷ್ಟೋ ದಿನ ಕುಕ್ಕರ್‌ನೂ ಬಡೀತೀನಿ ಒಲೇಮೇಲೆ ಬೆಳಗ್ಗೆದ್ದು!

**ಆ:** ಪರವಾಗಿಲ್ಲ, ಪರಮ ವೀರ ಮಹಾಶಯ್ರೇ, ಪತಿರಾಯ್ರೇ! ಹೀಗೆ ಕಳ್ಳನ್ಹಾಗೆ ಕುರ್ಚೀಲಿ ಬೇರೂರೋ ಬದ್ಲು, ಎಲ್ಲಾದ್ರೂ ಎರಡ್ಸೇರಕ್ಕೀ ನಾದ್ರೂ ತಂದ್ಹಾಕಿದ್ರೆ ಆಗ್ತಿರ್ಲಿಲ್ವೇನೋ?........ಮಕ್ಳೂ ನಾನೂ

ಹೊಟ್ಟೇಗಿಲ್ದೆ ಸಾಯ್ತಿದ್ರೂ ನಿಮಗೇನು ಚಿಂತೆ ತಾಗಲ್ಲಾಂತೀನಿ! ಅಬ್ಬ! ಏನಿದ್ದೀರೋ, ಭೂಮಿಗೆ ಭಾರ, ಅನ್ನಕ್ಕೆ ದಂಡ!

**ರಾ :** ಅಲ್ಲಾ, ನನ್ನ ಭೂಮಿಗೆ ಭಾರ ಅಂತೀಯಲ್ಲಾ, ಈ ನರಪೇತಲ ನಾರಾಯಣ, ರೇಷನ್ ಅಪರಾವತಾರ ಮೂರ್ತಿ, ನಾನು ಭೂಮೀಗೆ ಭಾರವ್ರೋ, ಇಲ್ಲಾ 'ಭಾರೀ' ಭಾರ್ಯೆ....ನೀನು....

**ಆ :** ಏನು ಏನು? ಏನಂದ್ರಿ?

**ರಾ :** ಏನಿಲ್ಲ, ಹೋಗ್ಲಿ ಬಿಡು. ನೋಡು ಆನೂ, ಸಮಾಚಾರ ಏನೂಂತಿ. ಈ 'ಸಕಲವಾಣೀ' ಪೇಪರ್‌ನಲ್ಲಿ, "ಗಾಂಧೀ ಭಕ್ತೆ, ರಾಷ್ಟ್ರಸೇವಿಕೆ ದೇಶೋದ್ಧಾರಿಣಿ ಆನಂದಾದೇವಿ ಅಪ್ಪಣೆ ಕೊಡಿಸಿದ ಅಮೋಘ ಭಾಷಣ ಬಂದಿದೆ. ಅದನ್ನು ಓದುತ್ತಾ ಓದ್ತಾ, ತಾಯ್ನಾಡ ಪ್ರೇಮ್ದಲ್ಲಿ ಮುಳುಗಿ ತಲ್ಲೀನನಾಗಿ, ತಾಟಸ್ಥ್ಯ ಹೊಂದ್ಬಿಟ್ಟ ಕು–ಕ್ಕ–ರ್ಬ–ಡ್ದಿ–ದ್ದೆ —ಕುಕ್ಕರ್ಸ್ಬೇಬಿಡ್ಡಿದ್ದೆ ಆನೂ!

**ಆ :** (ಸಿಟ್ಟಿನಿಂದ) ಸಾಕು ಸಭ್ಯ ನಿಮ್ಮ ಮುದ್ದು. ಆನುವಂತೆ ಆನು. ಆನೆಯೂ ಅಲ್ಲ, ಕುದುರೆಯೂ ಅಲ್ಲ, ದುಡಿಯೋ ಹೇಸರ್ಕತ್ತೆ! ಹಾಸ್ಯ ಬೇರೆ ಮಾಡೋದು ನನ್ಭಾಷಣಾನ! (ಅಳುವ ಧ್ವನಿಯಲ್ಲಿ) ಯಾರಿಂದ್ಲೋ ನನಗೆ ಈ ಗತಿ ಬಂದಿರೋದು?

**ರಾ :** (ನಿಧಾನವಾಗಿ) ಯಾರಿಂದಾಂತೀನಿ?

**ಆ :** ಕೇಳ್ತಾರೆ ಪಾಪ ಅರಗಿಣೀ ತೆರೆದ್ಬಾಗೆ ಬಾಯ್ತೆರ್ಕೊಂಡು! ಕಾಸಿನ ಸಂಪಾದ್ನೆ ಇಲ್ಲದ ಲಾಯರ್ರನ ಲಗತ್ತಿಸ್ಕೊಂಡು, ಪಂಚರಂಗೀ ಹಾಗೆ ಬಣ್ಣ ಬದಲಾಯಿಸ್ತಾ ಪರದಾಡೋ ಪಾಡು ನನಗೆ ವದಗ್ಸಿ ಕೊಟ್ಟ ರೋರು ಯಾರೂಂತೀನಿ! ಉಂ! (ಬೆರಳೆಣಿಸುತ್ತ) ನಿಮಗೇನಾದ್ರೂ pushಏ, positionನ್ನೇ, powerಏ, ಅಥ್ವಾ pensionನ್ನೇ? (ರಾಯರು ತಲೆಯಲ್ಲಾಡಿಸುತ್ತಿರುವರು) ಲಾಯರ್ಗಲನೇ ಆಗಿ ಯಾವ ಕಾರ್ಬಾರು ಕಂಡೆ, ಏನು ವೈಭೋಗ ವಿವರಿಸ್ಲಿ? ಮೂಲೇ ಮುದುಕೀ ಆಗ್ಹೋದ್ನೇ ಅಂತ ಕೊರಗ್ದೆ....ನಾನೂ ಎಲ್ಲರ ಹಾಗೆ ಸಮಾಜ ಸೇವೆ,

ಸಾರ್ವಜನಿಕ . ಕಾರ್ಯರ್ಾಂತ ಕುಣಿಯೋದೊಂದೇ ಮಾರ್ಗ ಅಂತ ಹೊಳೀತು !...........ಸರಿ, ಆ ಅತಂತ್ರ ಕಾಲದಲ್ಲಿ — ಅಧಿಕಾರಿಗ್ಳ ಅರ್ಧಾಂಗೀರ ಹಿಮ್ಮೇಳ ಹಿಡ್ದು, ಸಮಾಜ ಸೇವೆ ಸಂಗೀತ ಹಾಡಿ, ಹಲ್ಲು ಕಿರಿದದ್ದಾಯ್ತು ! ಈಗ, ಸ್ವತಂತ್ರ ಕಾಲ ಬಂತೂಂತ— ಈಗ ಬಿಚ್ಚಿ ಬಿಸಾಟ್ನಲ್ಲ–ಆ ಗಾಥಾ ಬಟ್ಟೆ ಸುತ್ಕೊಂಡು, (ಪತಿ "ಅದೇ ಖದ್ದರೂ ಅನ್ನು" ಅನ್ನುವನು) ರಾಜಕೀಯ ರಂಗದಲ್ಲಿ ರಾರಾಜಿಸ್ತಾ ಇದೀನಿ. ಅರ್ಥವಾಯ್ತೇ ?

**ರಾ :** ಅರ್ಥವಾಯ್ತು ಆನೂ (ಬಾಯಿ ಮುಚ್ಚಿಕೊಳ್ಳುತ್ತ) ಅಲ್ಲ ಅಲ್ಲ, ಅರ್ಥ ವಾಯ್ತೂಂದೆ ಅಷ್ಟೆ ಅಷ್ಟೆ !

**ಆ :** ಏನ್ಬಣ್ಣಿ ಬಳ್ಕೊಂಡ್ರೇನು ! ಮೂರ್ಕಾಸಿನ ಮರಮಾನವಿಲ್ಲ. ಮೊನ್ನೆ ಚುನಾವ್ಣೇಗೆ — ಏನೋ ಗಿಟ್ಟಿದ್ರೆ ನಾಲ್ಕು ಪುಡಿಗಾಸಾದ್ರೂ ಕೈಲಿ ಓಡಾಡುತ್ತಲ್ಲಾಂತ — ಕರೀಮಣೀ ಮೇಲ್ನ ಬಿಳೀ ಮಣಿ ಸಹ ಉಳಿಸ್ದೆ, ಇದ್ದದ್ದೆಲ್ಲ ಖರ್ಚು ಮಾಡ್ದೆ ಆ ಶೆಟ್ಟಿ, ಅವತ್ತು ಅಶಕ್ತ ಬಾಲಕೀ ಹಿತ್ರಕ್ಷಿ ಸಭೆಗೆ ಆತನ ಹೆಂಡ್ತೀನ ಅಧ್ಯಕ್ಷಿಣೀ ಅಟ್ಟದ್ಮೇಲೆ ಕೂರಿಸ್ಲಿಲ್ಲ ನಾನು ಅನ್ನೋ ಕೋಪಕ್ಕೆ, ಓಟುಗಳ್ನೆಲ್ಲ ತಾನೇ ಬೇಟೆ ಆಡ್ಕೊಂಡುಬಿಟ್ಟ !....ಹುಂ....ಏನ್ಮಾಡ್ಬೇಕು ಹೇಳಿ ನಿಮ್ಮಂಥಾ ನಾಲಾಯಕ್ ಸಾಥನ್ನ ಕಟ್ಕೊಂಡು ?

**ರಾ :** (ತಲೆ ಕೆರೆದುಕೊಳ್ಳುತ್ತ) ಅದನ್ನೇ ಯೋಚಿಸ್ತಾ ಇದೀನಿ ನಾನೂನು ............

**ನಿಂಗಿ :** (ಪ್ರವೇಶಿಸಿ) ಅವ್ವಾ, ಯಾರೋ ಬಂದವ್ರೆ.

**ಆ :** ಯಾರ್ನ ನೋಡಕ್ಕೆ ? ನನ್ನೋ ರಾಯರ್ನೋ ?

**ನಿಂ :** (ನಗುತ್ತ) ರಾಯರ್ನೋಡಾಕ್ಕೆ ಯಾರು ಬರ್ತಾರವ್ವ ! ಈ ಮನ್ಯಾಗೆ ! ತಮ್ಮನ್ನ ನೋಡಾಕೆ.

[ರಾಯರು ಗಂಟಲು ಸರಿಮಾಡಿಕೊಳ್ಳುತ್ತಾ ಕೆಮ್ಮುವರು]

**ಆ :** ಕರೀ ಅವರ್ನ ಒಳಕ್ಕೆ. (ರಾಯರು ನೇಪಥ್ಯದೊಳಗೆ ಹೋಗುವರು. ಆನಂದಾ ದೇವಿ ಬೇಗ ಅಲ್ಲಿ ಕುರ್ಚಿಗಳನ್ನು ಸರಿಪಡಿಸಿ, ಧೂಳು ಹೊಡೆಯುವಳು. ಮಹಿಳೆಯರಿಬ್ಬರ ಪ್ರವೇಶ.)

**ಮಹಿಳೆಯರು :** ನಮಸ್ತೇ.

**ಆ :** ನಮಸ್ತೇ. ಬನ್ನಿ, ಕೂತುಕೊಳ್ಳಿ. (ಎಲ್ಲರೂ ಕೂಡುವರು)

**ಮಹಿಳೆ ೧ :** ತಮಗೆ ತೊಂದ್ರೆ ಆಯ್ತು ಮಲಗಿದ್ರೇನೋ?

**ಆ :** ಅಯ್ಯೋ ಇಲ್ಲಮ್ಮ. ಮಲಗೋದೆಲ್ಲಿ!

**ಮಹಿಳೆ ೨ :** ಮಲಗೋಕೆ ಪುರಸತ್ತೆಲ್ಲಿ ತಮಗೆ? ಸೇವಾದೀಕ್ಷೆ ಹಿಡ್ದಿರೋ ತಮ್ಮಂಥಾ ತಾಯೀರ್ಗೆ, ಪ್ರತಿ ನಿಮಿಷವೂ ಬೆಲೆ ಬಾಳುವ ರಸನಿಮಿಷ!

**ಮಹಿಳೆ ೧ :** ಆ ಬೆಲೆಬಾಳುವ ಕಾಲಾವಕಾಶದಲ್ಲಿ, ಅಲ್ಪಕಾಲಾನ—— ನಮಗೂ ದೊರಕಿಸ್ಕೊಡಬೇಕು. ಅದನ್ನ ಕೇಳಕ್ಕೇ ನಾವು ಈಗ ಬಂದಿರೋದು........

**ಆ :** ಹೇಳೀಮ್ಮ, ಏನಾಗ್ಬೇಕು ಹೇಳಿ. ತಮ್ಮಂಥವ್ರ ಸೇವೆಗೇ ಅಲ್ವೇ ನಾನಿರೋದು?

**ಮಹಿಳೆ ೨ :** ಮೊನ್ನೆ ಮಹಿಳಾ ಸಮ್ಮೇಳನ ಆಯ್ತಲ್ಲ, ಅದ್ರಲ್ಲಿ ತಾವೂ ಪ್ರತಿನಿಧಿ ಆಗಿದ್ರೀಂತ ಕೇಳಿದ್ವು, ಅಲ್ಲಿ ಆಯ್ತಲ್ಲ ಠರಾವು, "ಪ್ರತಿ ಸಂಸಾರದಲ್ಲೂ ಮಿತ ಸಂತಾನ ಇರ್ಬೇಕು, ಮೂರು ಮಕ್ಕಳಿಗಿಂತ ಹೆಚ್ಚಾಗಿ ಇರಬಾರ್ದು" ಅಂತ, ಅದು ಬಲು ಅಮೂಲ್ಯವಾದ್ದು, ಅವಶ್ಯಕವಾದದ್ದು ನೋಡಿ. ಅದನ್ನ ನಮ್ಮ ಅಕ್ಕ ತಂಗೀರ್ಗೆಲ್ಲ ಪ್ರಚಾರ ಮಾಡ್ಬೇಕೂಂತ ನಮ್ಮಭಿಲಾಷೆ. ಆದ್ದರಿಂದ, ನಾಳೆ ಭಾನುವಾರ ಸ್ತ್ರೀಯರ ಸಭೆ ಒಂದ್ನ ಏರ್ಪಡ್ಸಿದ್ದೇವೆ. ತಾವು....ದಯವಿಟ್ಟು.... ಮಾತಾಡ್ಬೇಕು!....ತೊಂದರೆ ತಮಗೆ....

**ಆ :** ಛೇ ಛೇ! ತೊಂದರೆಯೇನು? ಹಾಗುಂಟೇ! ತಮ್ಮಭಿಮಾನ, ಆದರಕ್ಕೆ ನಾನು ಎದುರಾಡೇನೇ? ಅಗತ್ಯವಾಗಿ ಆಗಲಮ್ಮ.

**ಮಹಿಳೆಯರು :** ತುಂಬಾ ವಂದನೆಗಳು ತಮಗೆ. ನಾವು ಬರೋಣವೇ ?

[ಒಬ್ಬರಿಗೊಬ್ಬರು "ನಮಸ್ತೇ" ಹೇಳಿದ ಮೇಲೆ ಹೊರಟು ಹೋಗುವರು. ಆನಂದಾಬಾಯಿ ಹಣ ಎಣಿಸಿಕೊಳ್ಳುತ್ತಾ ನಗುವಳು. ರಾಯರ ಪ್ರವೇಶ]

**ರಾ :** ಇದೇನು ಆನಂದೂ ? ಹೀಗೆ ನಗ್ತಾ ಇದ್ದೀ ?

**ಆ :** (ನಗುತ್ತಾ) ಅಲ್ಲ, ಕಮ್ಮಿ ಮಕ್ಕಳಿರ್ಬೇಕು, ಸಂಸಾರದಲ್ಲಿ ಮೂರು ಮಕ್ಳಿಗಿಂತ ಹೆಚ್ಚಾಗಿರ್ಬಾರ್ದು ಅನ್ನೋ ಸಭೆಗೆ ನಾನು ಭಾಷಣಕಾರಳು! ಸಮ್ಮೇಳನದ ಪ್ರತಿನಿಧಿ! ಈ ಪ್ರತಿನಿಧಿಗೆ, ಭಾಷಣಕಾರಳಿಗೆ, ಎಷ್ಟು ಮಕ್ಳು ? ಕಿತ್ಕೊಂಡು ತಿನ್ನೋಕೆ (ಎಣಿಸುತ್ತ) ಒಂದು, ಎರಡು, ಮೂರು (....ಸಾ— ಎಣಿಸೋದ್ಯಾಕೆ ಒಂದೇ ಸಾರಿ ಹೇಳಿಬಿಡಿ, ಹತ್ತು! - ಹತ್ತು ಬೆಟ್ಟು ಎತ್ತಿ ತೋರಿಸುವನು.)........ಹತ್ತು ; ಹೇಗಿದೆ ಆದರ್ಶ ! (ಜೋರಾಗಿ ನಗುವಳು.)

**ರಾ :** (ನಗುತ್ತ).... ...ಅರೆರೆರೆ ! ಆನಂದೂ ! ಮಕ್ಳು ಅಂತಾಗ್ಲೇ ಒಂದು idea ಹೊಳೀತು ನೋಡು ! ಘನವಾದ idea

**ಆ :** ಅದೇನು ? ಬೃಹಸ್ಪತಿಗಳು ಅಪ್ಪಣೇ ಕೊಡ್ಬೇಕಾಗ್ಲಿ !

**ರಾ :** ಅಲ್ಲ, ನಿನ್ನೊಂದು ಶಿಶುವಿಹಾರ ಏಕೆ ತೆರೀಬಾರ್ದೂಂತೀನಿ ! ಮನೇಲಿ ಕಾಟ ತಪ್ಪಿಸ್ಕೊಳ್ಳಕ್ಕೆ ಅಮ್ಮಂದಿರು ದಮ್ಮಯ್ಯಾಂತ ಮಕ್ಕಳ್ನ ಅಟ್ತಾರೆ. ಅಳುಬುರುಕ ಮಕ್ಕಳ್ನ ಹಿಂಬ್ಳ ಒರ್ಸಿ, ಕಣ್ಣೊರ್ಸಿ, ಆಡ್ಸಿ ಕಳಿಸ್ಬಿಟ್ರಾಯ್ತು –ಹೇಗಿದ್ದರೂ ಅನುಭವಸ್ತರು ನಾವು–ಸುತ್ತ ಸುರಿಯುತ್ತೆ ಚಂದಾ ! .... ಬೇಕಾದ್ರೆ ನಾನೂ ಬರ್ತೀನಿ ಸಹಾಯಕ್ಕೆ.

**ಆ :** ಯಾಕೋ, ಚಂದಾ ಹಣ ನುಂಗಕ್ಕೇನೋ !

**ರಾ :** ಅಯ್ಯೋ, ಅಲ್ಲ ಆನಂದೂ. ಚಂದಾನುಂಗಕ್ಕಲ್ಲ ; ಮಕ್ಳಳ್ನಾಡ್ಸಕ್ಕೆ!

**ಆ :** ಹಾಗಾದ್ರೂ ಮಾಡಿ. ಹೇಗೂ ಉದ್ಯೋಗವಿಲ್ಲದೇ ಉಮುಳಾಡ್ತಾ ಇದೀರಿ........(ಯೋಚಿಸಿ) ಅಂತೂ ಇದು ಒಂದು ಒಳ್ಳೇ ideaನೇ !.... ........ಮಾಡ ಬಹುದು !........ನಮ್ಮ ಷೆಡ್ಡಿನಲ್ಲಿ, ಆ ಸೇಠು ಕಾರು

ಬಿಡ್ತಿದ್ದ ಕಾಲದ್ದೆರಡು ಹಳೇ ಟೈರಿವೆ. ಸೀನಿ ಸಣ್ಣೋನಾಗಿದ್ದಾಗ ನಮ್ಮಪ್ಪನ್ಮನೇಲಿ ಚೊಚ್ಚಲು ಮೊಮ್ಮಗಾಂತ ತೆಕ್ಕೊಟ್ಟಿದ್ದ ಗಾಡಿ, ಈಗವ್ರಿಗೆ, ಮೊಮ್ಮಕ್ಕಳ ಲೆಖ್ಖಾನೇ ಮರ್ತ್ಹೋಗಿದೇನ್ನಿ—

ರಾ : ಮುದುಕಿಯಾಗಿದೆ, ಆದ್ರೂ ಕೆಲಸಕ್ಕೆ ಬರುತ್ತೆ, ಕೆಲಸಕ್ಕೆ ಬರುತ್ತೆ; ಸರಿ ನಮ್ಮ ಮನೇತಿಶುಗಳ ವಡಕು ಸ್ಲೇಟುಗಳೂ, ಹರಕು ಚಿತ್ರಗಳೂ, ಬಣ್ಣದ ತುಂಡುಗಳೂ ಬೇಕಾದಷ್ಟು ಸಿಕ್ಕುತ್ವೆ !

ಆ : ಉಂ........ಯಾಕಾಗ್ಬಾರ್ದು ! ........ನನಗೂ ಕೈ ತುಂಬ ಕಾಂಚನ, ಕಾರು ಸವಾರಿ. ಪೇಪರ್ನ್ತುಂಬ ಹೆಸರು, ಸಿಕ್ಕದೇ ಹೋದೀತೇ ?........ (ರಾಯರ ಕಡೆ ತಿರುಗಿ) ಅಲ್ರಿ. ಇವಕ್ಕೆಲ್ಲ ದೊಡ್ಡೋನ್ನ ಹಿಡೀಬೇಕು. ಹೊಸದಾಗಿ ಬಂದಿದಾರಲ್ಲ ಅಧಿಕಾರಿ ಅರಿಮೂರ್ತಿರಾಯ್ರುರಂತ

ರಾ : ಅಳುಮೂರ್ತೀರಾಯ್ರು ?

ಆ : ಅಳುಮೂರ್ತಿರಾಯ್ರಲ್ರೀ ! ಅರಿಮೂರ್ತಿರಾಯ್ರು. ಅವರಾಚೇನ ಹಿಡೀತೀನಿ ಅಧ್ಯಕ್ಷ ಪಟ್ಟಕ್ಕೆ !

ರಾ : ಹೂಂ ! ಹಾಗೇಮಾಡು !

ಆ : (ಹೋಗುತ್ತ, ನಿಂತು) ಅಲ್ರೀ, ಅಂತೂ ಕೈಹಿಡಿದ ಹದಿನೈದು ವರ್ಷಕ್ಕೆ ಬುದ್ಧಿ ಹೊರವಾಯ್ತು ಕಣ್ರೀ ನಿಮಗಿವತ್ತು !

ರಾ : [ಹಿ ಹಿ ಹಿ ಹಿ ಎಂದು ಹುಲ್ಲು ಕಿರಿಯುವರು.]

ಆ : ಎಲ್ಲಿ, 'ಆನೂ' ಅನ್ನಿ.

ರಾ : (ಪ್ರೀತಿಯಿಂದ) 'ಆನೂ,' ನನ್ನ ಮುದ್ದಾನೆ!' (ಎಂದು ಅವಳ ಗಲ್ಲ ಸವರುವರು)

## ದೃಶ್ಯ ೩

[ಅಧಿಕಾರಿ ಅರಿನಮೂರ್ತಿರಾಯರ ಮನೆ. ಅಂಗಳದ ಮೇಲೊಂದು ದುಂಡು ಮೇಜು, ಹೂದಾನಿ. ಸುತ್ತ ಅಂದವಾದ ಮೆತ್ತೆಯ ಕುರ್ಚಿಗಳು, ಸೋಫಾ ಇಡಲ್ಪಟ್ಟಿವೆ. ಶಾಂತಮ್ಮ ಕುಳಿತಿರುವಳು. ಆನಂದಾನೇನಿ ಪ್ರವೇಶಿಸಲು, ಎದ್ದು ನಿಂತು "ನಮಸ್ತೇ" ಎನ್ನುವಳು.]

**ಶಾಂ:** ನಮಸ್ತೇ. ದಯಮಾಡಿ ಕೂತುಕೊಳ್ಳಿ. (ಇಬ್ಬರೂ ಕೂಡುವರು)

**ಆ:** ತಮಗೆ....ನನ್ನ ಪರಿಚಯವಿಲ್ಲ....ನಾನು....ಲಂಚಣ್ಣ ಲೇನಿನಲ್ಲಿರುವ ....ಲಾಯರ್ ಲಕ್ಷ್ಮಣ್ರಾಯ್ರು........ (ನಾಚಿಕೆಯಿಂದ) ಅವರೇ ನಮ್ಮೆಜ ಮಾನ್ರು !........ನಾನು ತಮ್ಮನ್ನ ಎದುರಿಗೆ ನೋಡಿಲ್ದಿದ್ರೂ, ಚೆನ್ನಾಗಿ ಕೇಳಿ ಬಲ್ಲೆ.

**ಶಾಂ:** ತುಂಬಾ ಸಂತೋಷ. ಆದರೆ....ಅದು ಹೇಗೋ.... ?

**ಆ:** ನಮ್ಮ ನಿಂಗೀ....ಕೆಲಸ್ದೋಳು....ಅವ್ಳೇ ತಮ್ಮ ಮನೇ ಪಾತ್ರೆ–ಮುಸರೆ ಉಜ್ಜೋಳು. ಅದರಿಂದ........ಹ ಹ ಹ ಹ ! ತಾವು........ಬೆಣ್ಣೆ ತರಿಸ್ತೀರಲ್ಲ ("ಓ, ಸರಿ" ಎನ್ನುತ್ತಿರುವಳು ಮಧ್ಯೆ ಶಾಂತಮ್ಮ) ಅಲ್ಲೇ ನಾನು ಎಣ್ಣೇ ತರಿಸೋದು ! ........ ತಮ್ಮ ಬೇಬೀದು ಬಟ್ಟೆ ........ ಅದೇ ಆ ಹೂವು ಹೆಣ್ದಿದ್ದು ........ (ಶಾಂತಮ್ಮ ಯಾವುದು ? "ಹುಂ ಹಾದ್ದಾದು" ಎನ್ನುತ್ತಿರುವಳು) .... ಆ ಬಣ್ಣ ಬಳ್ದೋನು ನಮ್ಮ ಧೋಬೀನೇ !

**ಶಾ:** ಹಾಗೇ ? ಶಾನೆ ತಿಳ್ಕೊಂಡಿದೀರಿ ಹಾಗಾದ್ರೆ ಪರವಾಗಿಲ್ಲ ನಮ್ಮನೇ ವಿಷ್ಯ ! .... ತಮ್ಮ ಹೆಸ್ರೇನೋ ....... ?

**ಆ:** ಆನಂದಾದೇವೀಂತ ........ ತಮ್ಮ ನಾಮಧೇಯ ........?

**ಶಾ:** ಶಾಂತಮ್ಮ.

**ಆ:** ತ್ಚು ತ್ಚು ತ್ಚು ತ್ಚು ಸ್ವಭಾವಕ್ಕೆ ತಕ್ಕ ಹೆಸ್ರು ........ ! ಮಕ್ಕಳು ....?

ಶಾ: ನಾಲ್ಕು ಜನ. ಎರಡು ಹೆಣ್ಣು, ಎರಡು ಗಂಡು.

ಆ: ಹೆಸರು?

ಶಾ: ಏನೋ ಇಟ್ಟಿದೀನಮ್ಮ. ಜವಹಿರ್, ಅಮೃತ್‌ಕುವರಿ, ಸುಭಾಷ್, ವಿಜಯಲಕ್ಷ್ಮಿ, ಅಂತ. ತಮಗೆಷ್ಟು ಮಕ್ಳು?

ಆ: ನನಗೇ? ........ ನನಗೂ ಇದಾರೆ ಸುಮಾರಾಗಿ........ಒಂದು ವಿಷಯ ಮಾತಾಡ್ಬೇಕಾಗಿತ್ತು ತಮ್ಮಲ್ಲಿ. ಅದಕ್ಕಾಗೇ ಬಂದೆ....ಒಂದು ಬಿನ್ನಹ ನಂದು .......ಆ........

(ಏಳೆಂಟು ವರ್ಷದ ಬಾಲಕನೊಬ್ಬನ ಪ್ರವೇಶ. ಬಾಯಿ ತುಂಬ ತಿಂಡಿ. ಕೈಯಲ್ಲಿ ಕೋಡ್ಬಳೆಗಳು)

ಶಾ: ಜವಹಿರ್? ಇದೇನಪ್ಪಾ? ಏನು ತಿಂತಿರೋದು? ಕೈಯ್ಯಲ್ಲೇನು? ಆ........?

ಬಾಲಕ: ಕೋಡ್ಬಳೇ ಕೊಡ್ಬಳೆ. ಅಟ್ಟದ್ಮೇಲಿಟ್ಟಿದ್ದೆ ನೀನು. ಮೆಟ್ಟಿ ಮೇಲೆ ಹಾರ್ದೆ, ಸಿಗಲಿಲ್ಲ. ಕಟ್ಟಿಗೇ ತೊಗೊಂಡು ಕೆಡವ್ದೆ ಬುಟ್ಟೀನ! (ನಗುತ್ತ ಕುಣಿಯುವನು.)

ಶಾ: ಬಲು ಜಾಣ. (ಬೆನ್ನುತಟ್ಟುತ್ತ) ಹೋಗು ನನ್ನಪ್ಪ, ಆಟಆಡ್ಕೋ (ಬಾಲಕನ ನಿಷ್ಕ್ರಮಣ) ಏನು ಜಾಣ ಮಾಡುಕೊಂತಿರಿ ಹುಡ್ಗ! ಅಸಾಧ್ಯ!

ಆ: ಅಲ್ವೇ. ನೋಡಿದ್ನಲ್ಲಾ! ಬಲು ಚುರುಕು, ಬಲು ಬುದ್ಧಿ. ತ್ಚು ತ್ಚು ತ್ಚು ತ್ಚು! ........ಅಂದ ಹಾಗೆ....ನನ್ನ ಚಿನ್ನ ಹ....ತಮ್ಮಲ್ಲಿ....

[ಕೆದರಿದ ತಲೆ, ಕೊಳಕು ಅಂಗಿ-ಅಂಗಿ ತುಂಬ ಕಡ್ಲೇಕಾಯಿ ತುಂಬಿಕೊಂಡಿರುವ ಬಾಲಕಿಯ ಪ್ರವೇಶ]

ಶಾ: ಮಗೂ ಅಮೃತಕುವರೀ, ಏನದು ಅಂಗೀಲಿ? ಅದೇನು ತುಂಬ್ಕೊಂಡು ತಿಂತಿರೋದು? ಎಲ್ಲಿ........ಕಡ್ಲೇಕಾಯಿ? ಎಲ್ಲಿತ್ತಮ್ಮ ತಾಯಿ?

ಬಾಲಕಿ: ಪೆಟ್ಗೇ ಮೇಲೆ—ನಿನ್ನ ರೂಮ್ನಲ್ಲಿ—ನಾಲ್ಕಾಣೆ ಇತ್ತು. ಎತ್ಕೊಂಡ್ಬಿಟ್ಟೆ. ಎತ್ಕೊಂಡು, ಪುಟ್ಟಂಗ್ಡೀ ಇತ್ತೇ—ಅಲ್ಲಿ, ಎಷ್ಟೂರ್ಗೆ ಅಲ್ಲಿಂದ ಕಡ್ಲೇಕಾಯಿ ತಂದೆ! (ತಿನ್ನುತ್ತ) ನಿಂಗೊಂದೆರಡು ಬೇಕೇ ನಮ್ಮಾ, ಕೊಡ್ತೀನಿ ಬೇಕಾದರೆ (ಕೊಡಹೋಗುವಳು)

ಶಾ: (ನಗುತ್ತ) ಬೇಡ ಭಂಗಾರ! ನೀನೇ ತಿನ್ಕೊಳ್ಳಪ್ಪ.. ....ಬೇರೆ ಬಟ್ಟೆ ಹಾಕಿಕೊಂಡು, ಓದ್ಕೊಳ್ಳೋ ಹೋಗಮ್ಮ. (ಹುಡುಗಿ ಹೋಗುವಳು.) ನೋಡಿದ್ರಾ ಈ ಹುಡ್ಗೀನ! ಒಬ್ಳೇ ಅಂಗ್ಡೀಗೆ ಹೋಗಿ ಬಂದಿದಾಳಲ್ಲ! ಬಲು ಗುಂಡಿಗೆ ಹೆಣ್ಣು!.......ಅದರ ಪ್ರೀತಿ ಎಷ್ಟು ಅಂತೀರಿ, ನೋಡಿದ್ರೋ ಇಲ್ವೋ ಆ ಕಡ್ಲೆಕಾಯಿ ಕೂಡ ನನಗೆ ಕೊಡಕ್ಕೆ ಬರ್ತಾಳೆ.

ಆ: ಮುದ್ದುಗಾರಾದ ಹುಡುಗೀನಮ್ಮ, ಪುಣ್ಯವಂತ್ರು ನೀವು!... ....ಅದೇ ನಾನ್ಹೇಳ್ತಿದ್ನಲ್ಲ.......

ಶಾ: ನೋಡಿ, ಮಾತ್ನಲ್ಲಿ ನಿಮ್ಮನ್ನ ಹಾಗೇ ಕೂಡಿಸ್ಬಿಟ್ಟೆ. ಏನು ಹಾಳು ಮರೆವೋ! ಕೊಂಚ ಕಾಫಿ ತರ್ತೀನಿ (ಹೇಳುವಳು. ಆನಂದಾದೇವಿ 'ಬೇಡಿ ಬೇಡಿ, ವೃಥಾ ತೊಂದರೆ' ಎನ್ನುತ್ತಲೂ, "ತೊಂದ್ರೆ ಎಂಥಾದ್ದು, ಬಿಸಿಸ್ಟೊತ್ತಿನಲ್ಲಿ ಮುಗೀಬಂತ್ರೆ ಇಷ್ಟೂ ಬೇಕೆ" ಎಂದು ಶಾಂತಮ್ಮ ಹೇಳುತ್ತ ಒಳಕ್ಕೆ ಹೋಗುವಳು.)

ಆ: (ಸ್ವಗತ) ಅಲ್ಲಾ. ಏನು ತಾಳ್ಮೆ ಈ ಪುಣ್ಯಾತ್ಗಿತ್ತೀಗೆ! ತ್ಚ ತ್ಚ ತ್ಚ ಕೋಡ್ಬಳೆ ಕದ್ದು ಕೋಡಗನ್ಹಾಗೆ ಬಂದ್ನಿಂತ್ಕೊಂಡ್ರೆ ಹುಡ್ಗ, ಒಂದ್ಮಾತು ಗದರಿಸ್ಲಿಲ್ಲ! ಕಾಸು ಕದ್ದು, ಕಡ್ಲೇಕಾಯಿ ತುರುಕ್ಕೊಳ್ತಿದೆ ಆ ಕೊಳಕು ಹೆಣ್ಣು, ಅದನ್ನ ಮುದ್ದಿಟ್ಟು, ಒಳ್ಳೆಮಾತಾಡಿ ಕಳಿಸ್ತಾಳೆ! ಏನು ವಿನಯ, ಎಷ್ಟು ಮರ್ಯಾದೆ! ಮಕ್ಕಳಿಗೆ ಇಟ್ಟಿರೋ ಹೆಸ್ರೋ! ಜವಹರ್, ಅಮೃತಕುವರಿ!' ಸುಭಾಷ್, ವಿಜಯಲಕ್ಷ್ಮಿ. ನವಭಾರತದ ನಾಯಕ ನಾಯಿಕೆಯರ ನಾಮಧೇಯ! ಆದರ್ಶ ಮಾತೆ ಈಕೆ. ಶಿಶುವಿಹಾರಕ್ಕೆ ಈಕೆ ಈಗ ಸರಿಯಾದೋಳು. ಆದರ್ಶ ಮಾತೆ!

( ಶಾಂತಮ್ಮ ಎರಡು ಕಪ್ಪಿನಲ್ಲಿ ಕಾಫೀ ತಂದು, ಒಂದನ್ನು ಆನಂದಾದೇವಿಗೆ ಕೊಟ್ಟು ಇನ್ನೊಂದನ್ನು ತಾನು ಕೈಗೆ ತೆಗೆದುಕೊಳ್ಳುವಳು. "ವೃಥಾ ತೊಂದರೆ ತೊಗೊಂಡ್ರಿ" ಅಂತ ಆನಂದಾದೇವಿಯೂ, "ಛೇ ಛೇ, ಏನಿಲ್ಲ" ಅಂತ ಶಾಂತಮ್ಮನೂ ಎನ್ನುತ್ತ, ಕುಡಿಯುವರು.)

ಆ: ಅದೇ ತಮಗೆ ಹೇಳಕ್ಕೆ ಹೋದ್ನೆಲ್ಲಾ: ನೋಡಿ ಈ ಮಕ್ಕಳ ಏಳ್ಗೇನ, ಅವರು ಮುಂದಕ್ಕೆ ಬರೋ ಮಾರ್ಗಾನ, ಮಹಿಳೇರು ಮನಗಾಣ್ಬೇಕು. ಅದು ಅವರ ಜವಾಬ್ದಾರಿ. ಆದರೆ ಸಾಧಾರಣವಾಗಿ, ಎಲ್ರಿಗೂ ಮನೇ ಕೆಲ್ಸ, ಸಂಸಾರ ತಾಪತ್ರಯ—ಹುಡುಗರ ಹಿತಾನ, ನೋಡ್ಕೋಳ್ಳಕ್ಕೆ ಅವಕಾಶ ಸಿಕ್ಕಲ್ಲ. ಆದ್ದರಿಂದ, ಒಂದು ಶಿಶುವಿಹಾರ ಸ್ಥಾಪಿಸೋಣ, ಅಸಹಾಯಕ್ರಾದ ಸೋದರೀಗ್ಗೆ ಸಾಕಷ್ಟು ಸಹಾಯವಾಗಿ, ಜನ್ಮ ಸಾರ್ಥಕ ಮಾಡ್ಕೊಳ್ಳೋಣ ಅಂತಿದೀನಿ. ಅದಕ್ಕೆ........ತಮ್ಮಂಥ ಆದರ್ಶನಾರೀ........ನೆರವು ಬೇಕು, ಸಹಕಾರಬೇಕು. ತಾವು ಉದಾರ ಮನಸ್ಸಿನಿಂದ, ಅಧ್ಯಕ್ಷರಾಗ್ಬೇಕು!

ಶಾ: ಛೇ ಛೇ ಉಂಟೆ! ನನಗೇನ್ತಿಳಿಯುತ್ತೆ? ಅಂಥ ಅಧಿಕಾರಕ್ಕೆಲ್ಲ ನಾನು ಅರ್ಹಳೇ! ಬೇಡಿ ಬೇಡಿ!

ಆ: ಚೆನ್ನಾಗಿ ಹೇಳಿದ್ರಿ. ತಮಗಿಂತಾ ಇನ್ಯಾರಿದಾರೆ! ಸಜ್ಜನರಿಗೆ ತಕ್ಕಂತೆ ತಾವು ಲಜ್ಜೇ ಪಡೋದೇನೋ ಸಹಜ್ವೇ....ಆದರೆ ...ತಮಗಿಂತ........ ಉಂಟೇ! ತಾವು ದೊಡ್ಮನಸ್ಸು ಮಾಡಬೇಕು........

ಶಾ: (ಯೋಚಿಸಿ) ಇಷ್ಟು ಆಗ್ರಹ ಮಾಡ್ತೀರಲ್ಲಾ. ನಾನೇನೋ ಯೋಗ್ಯ ಳಲ್ಲಾಂತ ನನಗ್ಗೊತ್ತು. ಆದರೆ........ತಮ್ಮ ವಿಶ್ವಾಸ........

ಆ: ಧನ್ಯಳಾದೆ. ತುಂಬಾ ವಂದನೆಗಳು ತಮಗೆ—ಎಷ್ಟೇ ಆಗಲಿ ತುಂಬಿದ ಕೊಡ ಅಲ್ವೇ.... ...(ಧ್ವನಿ ಬದಲಾಯಿಸಿ)....ಆ....ಇನ್ನೊಂದು ಮಾತು ........ಒಂದು ಸಂಘ, ಒಂದು ಸಂಸ್ಥೆ, ಸ್ಥಾಪಿತ್ವಾಗಬೇಕಾದ್ರೆ,........ ತಮಗೆ ಹೇಳ್ಬೇಕಾದ್ದೇ ಇಲ್ಲ........ಕುಬೇರನ ವರಾ ಬೇಕು. ತಾವು

........ಉದಾರ ಹೃದಯದಿಂದ ........ ಕೊಡುಗೈಯಿಂದ........ ತಮ್ಮ ಚೇತನವಿದ್ದಷ್ಟು ಚಂದಾ ಹಣಾನ........(ತೆರೆಯೊಳಗೆ "ಅಯ್ಯೋ" ಎಂಬ ಆಕ್ರಂದನ. ಶಾಂತಮ್ಮ "ಅಯ್ಯೋ ಯಾಕೇಂದ್ರೇ? ಎನ್ನುತ್ತ ಓಡುವಳು "ಅಯ್ಯೋ ಎದೆನೋವು, ಎದೆನೋವು" ಎಂಬ ಕೂಗು "ಏನಾಗುತ್ತೇಂದ್ರೇ? ಡಾಕ್ಟನ್ನ ಕರಿಸ್ಲೇ? ಅಯ್ಯೋ......ಲೋ ಬೋರಾ ಬೋರಾ, ಬೇಗ ಹೋಗೋ ಡಾಕ್ಟ್ರನ್ನೇಗ್ಕೊಂಡ್ಬಾಗೋ" ಎಂಬ ಮಾತು ಕೇಳುತ್ತಿರುವಾಗ ತೆರೆ ಬೀಳುವುದು)

## ದೃಶ್ಯ ೪

[ರತ್ನೆ ಅನುಮಾನೇನಿ ಖಿನ್ನಮನಸ್ಕಳಾಗಿ ಬರುವಳು.]

ಹುಂ!....ನನ್ನ ದುರದೃಷ್ಟವೇ! ಯಾವಾಗ್ಲೂ ಹೀಗೇ ಮುಕ್ಕಲ್ಲ ನನ್ನ ಭಾಗ್ಯ! ಕೈಗೆ ಬಂದ ತುತ್ತು ಬಾಯಿಗೆ ಬರ್ಲಿಲ್ಲ....ಬಿತ್ತು ಬಲೇಗೆ ಬೇಟೇಂತ ಹಿಗ್ಗಿದೆ....ಅಲ್ಲಾ ಈ ಸಾರ್ವಜನಿಕ ಸೇವೆ ಹಾಗೆ ಈ heart troubleಉ,---ಹೃದ್ರೋಗ ಸಾರ್ವಜನಿಕ ಚಟ ಆಗ್ಹೋಗ್ಬಿಟ್ಟಿರೋ ಹಾಗಿದ್ಯಲ್ಲಾ! ಯಾರ್ನ್ನೋಡಿದ್ರೂ heart weakಉ, heart troubleಉ!....ಪಾಪ, ಪ್ರಾಣಿ ಒಳ್ಳೇಳು! ಆಕೇಗೂ ಈ ಕಷ್ಟಾ ಬರ್ಬೇಕೇ!.... (ಕಾಲು ನೋಡಿಕೊಂಡು) ಅಯ್ಯೋ ಒಳ್ಳೇ ಕೆಲ್ಸ ಮಾಡ್ಕೊಂಡೆ! ಚಪ್ಲೀ ಅಲ್ಲೇ ಬಿಟ್ಬಂದಿದೀನಿ! ಮೊನ್ನೆ ತಾನೇ ನಾಲ್ಕೂಮುಕ್ಕಾಲು ಕೊಟ್ಟಿದ್ನಲ್ಲಾ!....ಹುಂ, ವಾಪಸ್ಸು ಹೋಗಿ ತರೋಣ. ಚಂದಾ ಚಕ್ಕರ್ ಆದದ್ದಲ್ದೆ, ಚಪ್ಲೀನೂ ಚಕ್ಕರ್ ಆದೀತು! (ಹೋಗುವಳು)

# ದೃಶ್ಯ ೫

[ಅಧಿಕಾರಿಯ ಮನೆ. ಅಧಿಕಾರಿ ಫೈಲುಗಳನ್ನು ಸೈನು ಮಾಡುತ್ತಾ ಕುಳಿತಿರುವನು. ಆನಂದಾಪೇಟಿ ಮೆಲ್ಲನೆ "ಇದೇನು ಗಲಾಟೆಯೇ ಇಲ್ಲವಲ್ಲಾ?" ಎನ್ನುತ್ತಾ ಬಂದು ನಿಂತುಕೊಳ್ಳುವಳು. ಶಾಂತಮ್ಮ ಬಾಲಕನನ್ನು ಹಿಡಿದು ಹೊಡೆಯುತ್ತಾ ಬರುವಳು.]

**ಶಾ:** ಲೋ ಜವರು, ಕತ್ತೇ! ಎಲ್ಹೋಗಿ ಕದ್ದೆ ಕೋಸ್ಕಳಿ ಎಲ್ಲಾ! ಕಳ್ಳ! ಸೇರು ಹಿಟ್ಟು ಜೇಯಿಸ್ಸಿಟ್ಟಿದ್ದರೆ, ಅರ್ಧ ನಿಗಿದ್ಬಿಟ್ಟಿದಾನೆ! ಕಾಲ್ಮುರ್‍ದ್ಬುಡ್ತೀನಿ ನೋಡು. ಕಟ್ಗೇಲಿ ಕೆಡವಿದ್ರಲ್ಲಾ ಆ ಕೈಗೆ ಬರೆ ಕಾಸ್ಬುಡ್ತೀನಿ, ಬರಿ!....ಕತ್ತೆ....ಬಡ್ರಾ! (ಬೆನ್ನಿಗೆ ಗುದ್ದುವಳು. ಬಾಲಕನು ಅಳುವನು) ಎಲ್ಹೋಗಿ ಅವ್ಳು ಆ ಅಮ್ಮ? (ಪತಿಯನ್ನು ಕುರಿತು) ಅಲ್ಲಾ, ಆ ಘಡೀ ಹೆಂಗ್ಸಿನ ದೇಶಾವರದ ನಗುಮುಖಾನ ಕಿಟಕೀಲಿ ನೋಡ್ತಾಲೀ ಧರ್ಮಿಷ್ಟೆ ದಯಮಾಡಿಸ್ತಿದಾಳೇಂತ ತಿಳ್ಕೊಂಡು, ನಾಲ್ಕಾಣೆ ಪಟ್ಗೇ ಮೇಲೆ ಎತ್ತಿಟ್ಬಂದ್ರೆ, ಈ ಅಮ್ಮ ಅದನ್ನೇ ಹಾಸ್ಕಿ ಬಿಡೋದೇ! (ಹುಡುಗನನ್ನು ಹೊಡೆಯುತ್ತಾ) ಕಡ್ಲೇಕಾಯಂತೆ ಕಡ್ಲೇ ಕಾಯಿ! ನನಗ್ಬೇರೇ ದಾನ ಮಾಡ್ತಾರ್‍ತ್ತೀಳಿ ಧಾರಾಳ್ವಾಗಿ. ನಿನ್ನ ಬಟ್ಟೆಗೋ, ನಿನ್ನ ಕೊಳಕ್ಮೂತಿಯೋ, ಕೋಣ! ಮೊನ್ನೆ ತಾನೇ ಹೊಲ್ಸಿದ ಫ್ರಾಕು-ಹರಿದು ಜೂಲು! ಕೆನ್ನೇಗೆರಡ್ಕೊಡೋಣಾಂತಿದ್ರೆ ಆಗ್ಲೇ (ಹೊಡೆಯುವಳು, ಹುಡುಗನಿನ್ನೂ ಅಳುವನು).

**ಅಧಿಕಾರಿ:** ಹೋಗ್ಲಿ ಬಿಡೇ ಹೊಡೀಬೇಡ ಮಕ್ಕಳ್ನ (ಬಿಡಿಸುವನು)

**ಶಾ:** ಓಹೊಹೊಹೋ! ನಿಮ್ಮ ವಕೀಲಿ ಬೇರೆ ಇವರ ವಕ್ರಕ್ಕೆ!........... ಅದ್ಸರಿಕಣ್ರೇ. ನೀವ್ಯಾಕೆ ಹಾಗೆ ಹಾರಾಡಿದ್ರೀ ಎದೇ ನೋವು ಎದೆ ನೋವೂಂತ? ಗುಂಡ್ಕಲ್‍ನ್ಹಾಗೆ ಕೂತಿದೀರಿ ಈಗ?

**ಅಧಿ:** (ನಗುತ್ತಾ) ಆ ನಾಲ್ಕಾಣೇ ತಾನೇ ನೀನ್ಯಾಕೆ ತೆರಬೇಕು ಆ ಹಯವದನೇಗೇಂತ ಹೃದಯವೇದನೆ ಬರಿಸ್ಕೊಂಡುಬಿಟ್ಟೆ ಶಾಂತೂ!

(ಇಬ್ಬರೂ ಬಿದ್ದು ಬಿದ್ದು ನಗುವರು. ಇದುವರೆಗೂ ಆಶ್ಚರ್ಯ, ಅವಮಾನ ಗಳನ್ನು ಮುಖದಲ್ಲಿ ಸೂಚಿಸುತ್ತಾ "ಹಾ! . . . . ಅಯ್ಯೋ!" ಇತ್ಯಾದಿ ಸಭಿಕರ ನ್ನುದ್ದೇಶಿಸಿ ಅನ್ನುತ್ತಿದ್ದ ಆನಂದಾವೇಣಿ, ಅಧಿಕಾರಿಯ ಕೊನೆಯ ವಾಕ್ಯವನ್ನು ಕೇಳಿದ ಕೂಡಲೇ "ಅಯ್ಯೋ!" ಎಂದು ಚೀರಿ ನೆಲಕ್ಕೆ ಬೀಳುವಳು.)

**ಶಾಂ : ಅಧಿ :** ಹಾ! ಇವಳೆಲ್ಲಿಂದ ಬಂದ್ಳು ಇಲ್ಲಿ? (ಇಬ್ಬರೂ ಹತ್ತಿರ ಹೋಗುವರು)

**ಶಾಂ :** (ಗಾಬರಿಯಿಂದ) ಇವಳ್ಗೇನಾಗ್ಬಿಟ್ಟಿದೆ! ನೋಡೀಂದ್ರ!

**ಅಧಿ :** (ಬಗ್ಗಿ ನೋಡಿ) ಶಾಂತಾ! ಇವಳಿಗೆ, ನಿಜವಾದ, ಸತ್ಯವಾದ, ಹೃದಯಸ್ತಂಭನ ಆ–ಗ್ಹೋ–ಗ್ಬಿ–ಟ್ಟಿ–ದೆ!!

ತೆರೆ -

# ಊರ್ಗೊಂದ್ ಅಡ್ಗೇ ಮನೆ

ಅಥವಾ

# ಸಾಮೂಹಿಕ ಪಾಕಶಾಲೆ



ಪಾತ್ರಗಳು.

| | |
|---|---|
| ಸರೋಜ<br>ಶಾರದಮ್ಮ<br>ಧರ್ಮಾಂಬ<br>ರಮಾಬಾಯಿ | ಗೆಳತಿಯರು |

ಇಬ್ಬರು ಅಸ್ತ್ರೀಯರು

ಸರೋಜಳ ಪತಿ

# ಊರ್ಗೊಂದ್ ಅಡ್ಗೇ ಮನೆ

## ದೃಶ್ಯ ೧

(ಸರೋಜ "ಚಂದಾರೆ, ಬಾರೇ ಬಾರೇ, ಪಿಯಾಕೇ ಸಂದೇಸಾ......." ಎಂದು ಫಿಲ್ಮ್ ಗೀತೆ ಗುನುಗುತ್ತಾ ಕಾಲು ನೀಡಿಕೊಂಡು ಈಸೀಛೇರ್ ಮೇಲೆ ಕುಳಿತಿರುವಳು. ಅತ್ತೆ ಪ್ರವೇಶ.)

**ಅತ್ತೆ :** ಇದೇನೇ ಇದು. ಎಂಟ್ಗಂಟೆ ಆದ್ರೂ ಹೀಗೇ ಕಾಲ್ನೀಡ್ಕೊಂಡು ಕಿರಲ್ತಾ ಕೂತಿದ್ದೀ? ಮೈ ತೊಳ್ಕೊಳ್ಳಿಲ್ಲ. ಮಡೀ ಉಟ್ಟಿಲ್ಲ! ನಿನ್ಗಂಡಂಗೇನು ಅಡ್ಗೆ ಗಿಡ್ಗೆ ಮಾಡಿ ಬಡಿಸ್ಬೇಕೋ ಇಷ್ಟೇ ಇಲ್ವೋ? ಆಫೀಸ್ಗೋಗ್ತಾ ಗಪ್ಚೇ ಟಿಫನ್ಗೇ? ....... ನಾನಾದ್ರೂ ಮಾಡ್ತಾ ಕೋಣಾಂದ್ರೆ....... ಈ ಹಾಳು ವಾಯುನೋವು; ಕೈ ಸ್ವಾಧೀನವಿಲ್ಲ. ತಪ್ಪಲೀನೇ ಕುಟ್ಟಿದ್ದೀನೋ ಏನೋ.......... (ನಿಷ್ಠೆ ಮಾಡಿದ್ರೂ ಇಷ್ಟೊಷ್ಟೂ ಮೊದಲೇ ಇಲ್ಲ!)........ಅಲ್ಲಾ ಕಣೇ........

**ಸರೋಜ :** (ಘೋಷಣೆಯಿಂದ) ಇವತ್ತಿಂದ ಮನೇಲಿ ಅಡಿಗೇ ಇಲ್ಲಾ.

**ಅ :** ಅಡ್ಗೇ ಇಲ್ಲ! ಹಾಗಂದ್ರೇನೇ?

**ಸ :** ಹಾಗಂದ್ರೆ, ಇವತ್ತಿಂದ, mass kitchen,ನ್ನು ಅಂದ್ರೆ ಸಾಮೂಹಿಕ ಪಾಕಶಾಲೇ!

**ಅ :** ಅ! ಅ! ಅದೇನು ಅದೇನು? ಮೂಷಿಕಮೋದಕ ಅಂತ ಅದೇನೋ ಮಂತ್ರ ಜಪಿಸ್ದಾಗೆ ಹೇಳ್ತಿದ್ದೀ? ಏನೇ ಅದು?

**ಸ :** ಏನೂಂದ್ರೆ, ನಾವೆಲ್ಲಾ ಸರ್ಕಾರೀ ನೌಕರ್ರ ಹೆಂಗಸ್ರು ಬೆಳಗಾದ್ರೆ ಅಡಿಗೇ ಬೇಯಿಸ್ಕೊಂಡು ಕೂತಿರೋದು ಕಲ್ಚರ್ಗೆ ಕಳೇಇಲ್ಲ, ಕಂಪನೀಗೆ

ಅವಕಾಶ ಇಲ್ಲಾ, ಅದರಿಂದ ಇನ್ಮೇಲೆ mass kitchenನ್ನಾ—ಅಂದ್ರೆ ಸಾಮೂಹಿಕ ಪಾಕಶಾಲೆ—ಅಂದ್ರೆ ಊರ್ಗೆಲ್ಲಾ ಒಂದೇ ಅಡ್ಗೇಮನೆ ಏರ್ಪಾಡ್ಮಾಡ್ಬಿಡಬೇಕು, ಈ ಒಲೆ ಮುಂದೆ ಒಣಗೋ ಕಾಟ ತಪ್ಪಿಸ್ಕೋಬೇಕು ಅಂತ ನಿರ್ಧರಿಸ್ಬಿಟ್ವಿ. ಅದರ್ಪ್ರಕಾರ, ಇವತ್ನಿಂದ ಈ ಕುಂಬ್ಳಾರ್ಕ್ನೋರ್ಗೆಲ್ಲಾ ಅನ್ನಪೂರ್ಣ ನಿವಾಸದಲ್ಲಿ ಅಡ್ಗೆ; ಅನ್ನದಾನಪ್ಪನ ಛತ್ರದಲ್ಲಿ ಊಟ!

**ಅ**: ಇದೇನ್ಹೇಳ್ತಿದೀರೇ? ಬರ್ತಾ ಬರ್ತಾ ನಿವೆಲ್ಲಿಗ್ಬರ್ತಿದೀರೇ? ಅಡಿಗೆ ಮಾಡಕ್ಕೆ ಕೈಲ್ಲಾರಿದಿದ್ರೆ ಅಡಿಗ್ಗೆ ಯಾರ್ನಾರೂ ಇಟ್ಕೊಳ್ಳೋದು.

**ಸ**: ಹುಂ! ಇಟ್ಕೊಂಡ್ಹಾಗೇ ಇದೆ ಈ ರೇಷನ್ಕಾಲದಲ್ಲಿ! ಕೊಡೋ ರೇಷನ್ನಿನಲ್ಲಿ ಮೂರ್ಜನದ್ಪಾಲು ಅವರ್ಗೇ ಇಡಬೇಕು; ಜೊತೆಗೆ ೨೦–೩೦ ರೂಪಾಯಿ ಅಲ್ಲದೆ! ನಿಮ್ಮಗನಿಗೆ ಬರೋ ಸಂಬ್ಳಅರ್ಧ ಕೊಚ್ಕೋಗುತ್ತೆ ಅಷ್ಟೆ!

**ಅ**: ಹಾಗಂತ, ಈ ಅನ್ಯಾಯವೇ? ಯಾವ್ದೋನೋ ಬೇಯ್ಸೋದಂತೆ, ಎಲ್ರೂ ತಿನ್ನೋದಂತೆ. ಏನ್ ನಾಚಿಕ್ಕೇಡಿದು? ಮಡಿ ಇಲ್ಲ, ಮೈಲಿಗೆ ಇಲ್ಲ, ........ಹುಂ........ನೀವೆತ್ಲಾಗಾದ್ರೂ ಹೋಗಿ, ನನ್ಪಾಡಿಗ್ನಾನು ಮನೇಲಿ ಮಾಡ್ಕೊಂಡು ತಿಂತೀನಿ.

**ಸ**: (ನಗುತ್ತ) ಏನ್ಮಾಡ್ಕೊಂಡ್ತಿಂತೀರಿ? ನಮ್ ನಮ್ ರೇಷನ್ನು ಪಾಕಶಾಲೆಗೆ ಕೊಡ್ದೇ ಹ್ರೋದ್ರೆ ಬಿಟ್ಟೇ ಕವಳ ಹಾಕ್ತಾರೇನು? ಮನೇಲೊಂದ್ಕಾಳಕ್ಕಿ ಇಲ್ಲ!

**ಅ**: ಸರಿ, ಮತ್ತೂ ಚೆನ್ನಾಯ್ತೇಳು. ಇನ್ನೇನು, ಈ ಗೋದೀ ರೊಟ್ಟೀ ಕಾಟದಲ್ಲಿ ಅರ್ಧ ದಿನ ಏಕಾದಶೀ ಮಾಡ್ತಿದೀನಿ, ಇನ್ಮೇಲೆ, ನನ್ನಂಥಾ ಮುದಿ ಗುಗ್ಗುಗಳು ನಿತ್ಯೇಕಾದಶಿ ಮಾಡ್ಬಿಡೋದೇ ಮಾರ್ಗ ನಿನ್ನಂಥಾ ಸೊಸೇರ ದಯದಿಂದ!

(ರಮಾಬಾಯಿ ಪ್ರವೇಶ)

**ರಮಾಬಾಯಿ :** ಸರೋಜ ಸರೋಜ, (ಆಶ್ಚರ್ಯದಿಂದ) ಏನ್ರೀ ಹಿಂಗೇ ಕೂತಿದ್ದೀರಿ dress ಮಾಡ್ಕೊಳ್ಳೀ! ಇನ್ನೇನು ಇವತ್ನಿಂದ ಹಾಳು ಯೋಚ್ನೆ ಇಲ್ವಲ್ಲಾ ಸಧ್ಯ! ನಡೀರ್ರಿ, ಅಜಯಲಕ್ಷ್ಮೀ ಹಾಲಿನಲ್ಲಿ ಅಪ್ಪಟ SILKನ ಚೋಲೀಪೀಸುಗಳ್ಬಂದಿವೆಯಂತೆ, ದಿವಿನಾಗಿದೆ. ಹರಿಸ್ಕೊಂಡು ಬರೋಣ.

(ಧರ್ಮಾಂಬ ಮತ್ತೊಂದು ಪಾರ್ಶ್ವದಿಂದ ಪ್ರವೇಶ)

**ಧರ್ಮಾಂಬ :** ಅಬ್ಬ! ಪದ್ಯ ಶಮೋಲ್ಬಂಟಿ ಇಲ್ಲಮ್ಮಾ! ಅಡಡಡ........ ಎತ್ನನೆಯೋ ಪುರುಶತ್ತು ಇವತ್ತು............ವಾಂಗೋಮ್ಮ ಎಲ್ಲಾ. ಶಾಭಾಸ್‌ನಗರೆತ್ತಿಲೆ ಎಗ್ಜಿಬಿಷನ್ ಇರ್ಕೇ ನೋಡಿ ಬರಾನ.

(ಶಾರದಮ್ಮ ಪ್ರವೇಶ)

**ಶಾ :** Hullo, hullo, ಏನೆಲ್ರೂ ಹೀಗೆ ನಿಂತ್ಬಿಟ್ಟಿದೀರಿ timewaste ಮಾಡ್ತಾ, ಈ ಹಾಳು ಒಲೆ ಸೆರೆ ತಪ್ಪಿರುವಾಗ? ಬನ್ರೀ ಆಪತ್ಬಾಕೀಸಿನಲ್ಲಿ 'ಅಧ್ವಾನ' ಪಿಕ್ಚರ್ರು, morning show ಹಾಕಿದಾನೆ, ಸೊಗಸ್ಸಾಗಿದೆ ಯಂತೆ. ಹೋಗ್ಬರೋಣ ನಡೀರೀ!

(ಎಲ್ಲರೂ ಒಟ್ಟಿಗೆ "ಕಲಾಪ್ರದರ್ಶನ, ಸೀರೆ ಶಾಪು, ಸಿನೀಮಾ, ನೃತ್ಯ" ಎಂದು ಕೂಗುತ್ತ ಸರೋಜನನ್ನು ಎಳೆದಾಡಿಕೊಂಡು ಹೋಗುವರು. ಬಪ್ಪಾಗಿ ನೋಡುತ್ತ ನಿಂತಿದ್ದ ಅತ್ತೆ "ಚೆನ್ನಾಯ್ತು" ಅಂದುಕೊಳ್ಳುತ್ತ ಹಣೆ ಹಣೆ ಬಡಿದುಕೊಂಡು ಹೋಗುವಳು)

## ದೃಶ್ಯ ೨

(ಇಬ್ಬರು ಅತ್ತೆಯರ ಪ್ರವೇಶ)

**ಮೊದಲನೆಯ ಅತ್ತೆ:** ಅಲ್ಲಾ ನೋಡಿದ್ರಾ, ಎಲ್ಲಿಗ್ಬಂತು ಕಾಲ ಎಲ್ಲಿಗ್ಬಂತು! ತ್ಚು ತ್ಚು ತ್ಚು ತ್ಚು....ಎಲ್ಲಿಗ್ಬಂತು!

**ಎರಡ್ನೇ ಅತ್ತೆ:** ನೋಡಿದ್ನಮ್ಮಾ ನೋಡ್ದೆ, ಎರಡ್ಕಣ್ಣಿಂದಲ್ಲ, ಈ ನಾಲ್ಕು ಕಣ್ಣುಗಳಿಂದ್ಲೂ ನೋಡ್ತಿದೀನಿ.

**ಮೊ:** ಮದ್ವೆ ಆದಾಗ್ಲೇ ಹೇಳ್ದೆ ನೋನುಂಗೆ, ಬೇಡ ಕಣೋ, ದೊಡ್ಮನುಷ್ಯರ ಮನೇ ಹೆಣ್ಣು, ನಮ್ಮಂತಸ್ತಿಗೆ ತಕ್ಕಾಗೆ ಲಗ್ನಾಗೋ ಅಂತ! ಕೇಳಿದ್ನೇ? ಈಗನುಭವಿಸ್ತಿದೀವಿ--ಅನ್ನಲ್ಲ ನಾನೂನ್ನಿ!....ಅಲ್ಲಾ ಸೌದೇಲ್ಯಾರ್ನಾಯೋರೂಂತ ಇವ್ಳಡ್ಗೆ ಶುರು ಮಾಡಿದ್ಳು. ಅದೇನೋ ಹೋಗ್ಲಿ, ಹಸೀ ಸೌದೆ ಉರ್ಯೋದ್ಕಷ್ಟ (ಇಬ್ಬರೂ "ನೀವೂ ನಾವೂ ಮಾಡಿದ್ರೂ ಅಷ್ಟೆ, ಹಣ್ಣುಸೀಪಾಳು ಡಿಪೋ ಸೌದ" ಇತ್ಯಾದಿ ಒಬ್ಬರಿಗೊಬ್ಬರು ಅಂದುಕೊಳ್ಳುವರು)........ಅದೇನೋ ಹೋಗ್ಲಿ,-ಆಮೇಲೆ, ಹಾಳಿದ್ಲು, ಕೈ ಮಸಿಯಾಗತ್ತೆ, ಮುಖ ಮಾಸತ್ತೆ, ಇಲೆಕಟ್ರಿಕ್ ಒಲೆ ಹಾಕ್ಸಿದ್ರೆ ನಾನಡ್ಗೆ ಮಾಡೋದು ಅಂತ ಹಠ ಹಿಡಿದ್ಬಿಡೋದೇ! ಅವಳ್ಹೇಳಕ್ಕೆ ಇವನ್ಕುಣಿಯಕ್ಕೆ. ಸರಿ, ಅದೂ ತಯಾರಾಯ್ತು. ಮುಸುರೆಯೋ, ಪೈಲಿಗೆಯೋ, ಅದನ್ನೇನ್ಸಾರಿಸ್ಬೇಕೇ, ತೊಳೀಬೇಕೇ! ನನ್ಮಾತ್ರೇ ನ್ನಡಿಯತ್ತೆ ಹೇಳಿ. ರಾಮಾ ನೀನೇ ಗತೀಂತ ಕಣ್ಮುಚ್ಕೊಂಡು ಅವಳ್ಹಾಕಿದ್ದು ತಿಂತಾ ಇದ್ದೆ............ ...ಈಗ, ಆ ಅಡ್ಗೆ ತಾನೇ ಯಾರ್ಮಾಡೋರು ಅಂತ ಅದೇನೋ....ಮೂಷಿಕ ಪಾಕಸಾಲ್ಯೋ........ (ಇಬ್ಬರೂ, ಅಲ್ಲ ಮೂಸಿಕ ಕಾಪೀಶಾಲೆ. ಅಲ್ಲ ಮೋಹಕ....ಅಲ್ಲ....ಅನ್ನುವರು) ........ಅದೆಂಥಾದ್ದೋ ಅದೇನ್ಸುಡ್ಗಾಡೋ, ಯಾವ್ದೋನೋ ಬೇಯ್ಸೋದಂತೆ ಇವ್ರೆಲ್ಲಾ ತಿನ್ನೋದಂತೆ ಪ್ರಾರಂಭಿಸ್ದಾರಲ್ಲಾ!

ಎ: (ನಗುತ್ತಾ) ನೀವಿನ್ನೊಂದ್ಕೇಳ್ಲಿಲ್ಲ. ಆ ಸಮ್ಮೇಳ್ನಾನೋ ಅದೇನೋ ಮಾಡಿದ್ರಲ್ಲ ಅವ್ರಲ್ಲಿ, "ಚೆನ್ನಾಗಿ ಮಕ್ಕಳ್ನ ಸಾಕೋ ತಾಯೀಗೆ ಪ್ರಶಸ್ತಿ ಕೊಡ್ಬೇಕೂಂತ್ಬೇರೆ ನಿರ್ಧರಿಸಿದ್ರಂತೆ, ನನ್ಗಾಸೆ ಕೊಚ್ಕೊಂಡ್ಹು!........ ಅಲ್ಲಾ, ನಾನೂ ನೀವೂ, ನಮ್ಮಮ್ಮ ನಿಮ್ಮಮ್ಮ, ನಮ್ಮಜ್ಜಿ ನಿಮ್ಮಜ್ಜಿ, ಮಕ್ಕಳ್ನ ಸಾಕ್ಲೀ ಇಲ್ವೇ? ಹೆತ್ತೋಳು ಮಗೂನ್ಸಾಕೋದೊಂದತಿಶಯ್ವೇ? ಇದಕ್ಕೆ ಉಡ್ಗರೆ ಕೊಟ್ಟು ಉಬ್ಬಿಸ್ಬೇಕೇ?........ಇವತ್ತಿದಾಯ್ತು, ನಾಳೆ, ಗುದ್ದಾಡ್ದೇ ಇದ್ದ ಗಂಡ ಹೆಂಡ್ತೀರ್ಗೊಂದು ಬಹುಮಾನ, ಕಿತ್ತಾಡ್ದೇ ಇದ್ದ ಅತ್ತೆ ಸೊಸೇರ್ಗೊಂದುಡ್ಗರೆ, ಕೊಡ್ತಾರೋ ಏನೋ?

ಮೊ: (ನಗುತ್ತಾ) ಅದೇನಾಗುತ್ತೋಮ್ಮ ಕಂಡೋರ್ತ್ಯಾರು. ಈ ಕಾಲ್ದುಡ್ಗೀರ್ನ ಮಾತಾಡ್ಸಿ ಬದ್ಕೋಹಾಗಿಲ್ವೇ!..........ಅಲ್ಲಾ, ನಮ್ಮಾಗೇ ಪೂರ್ವಕಾಲದ ಪುಟ್ಟೀರಲಂಕಾರ ಮಾಡ್ಕೊಳ್ಳೋದು, ಫ್ಯಾಶನ್ನು ಅನ್ನೋದು. ನಮ್ಕಾಲದಲ್ಲಿ ಬಾಣಂತೀರು ಕಷ್ಪಟ್ಕೋತಿದ್ರು. ಈ ಕಾಲ್ದೋರು ನಿತ್ಯಾ ಬಾಣಂತೀರೇ! ನಮ್ಕಾಲ್ದ ಹಾಗೇ ಅರ್ಧ ಹಣೇಗೆ ಕುಂಕುಮ ಇಟ್ಕೋತ್ತಾರೆ, ಈ ಗಂಟ್ನ ನಾವು ಎಣ್ಗಂಟೂಂತ ಹಾಕ್ಕೋತೀವಿ, ಅವ್ರು ಬೆನ್ಮೇಲೆ ಗಂಟಿಟ್ಕೊಂಡು ಪಿನ್ಚುಚ್ಕೋತಾರೆ. ನಾವೂ ರವ್ಕೆ ಖಣ ತೊಟ್ಕೋತೀವಿ, ಅವ್ರೂ ತೊಟ್ಕೋತಾರೆ, ನಾನುಟ್ಟಿದ್ದೋ ಅಂಥಾದ್ದೇ ಮೊಳ್ದುದ್ದ ಅಂಚಿನ್ಸೀರೆ ಉಡ್ತಾರೆ. ಫ್ಯಾಶನ್ನಂತೆ........ ಅಲ್ಲಾ, ನನ್ಪೆಟ್ಗೇಲಿ, ನನ್ಕಾಲದ್ದೊಂದು ತತ್ವಾಚಾರೀ ಖಣ ಇತ್ತು (ಅಳು ಧ್ವನಿಯಲ್ಲಿ ನಮ್ಮಜಮಾನ್ರು ಗೌರೀ ಹಬ್ಬದಲ್ಲಿ ತಂದಿದ್ರಿನ್ನ, ಎಷ್ಟೋ ಮಮ್ತೆಯಿಂದ ಮುಚ್ಚಿಟ್ಟಿದ್ದೆ.) ತೆಕ್ಕೊಟ್ಟು, ಹೊಲಿಸ್ಕೊಳ್ಳೀಂತ ನನ್ನ ಸೊಸೀಗೆ ಕೊಟ್ರೆ, "ಥೂ, ಇದು ರವ್ಕೆ ಖಣ. ನಾವ್ತೊಟ್ಕೊಳ್ಳೋದು ಚೋಲಿ!" ಅಂತ ಮುಖದ್ಮೇಲೆ ಎಸೆದ್ಬಿಟ್ಲಲ್ಲಮ್ಮಾ!

ಮೊ: ಚೋಳಿಯೋ, ಚೋಳಿನ ಕೊಂಡಿಯೋ! ಹೇಳ್ಕೊಳ್ಳಕ್ಹೋದ್ರೆ ಕೊನೇ ಇಲ್ಲ, ಮೊದ್ಲಿಲ್ಲ....ಹೋಗ್ಲಿ ನಡೀರಿ, ಪುರಾಣಕ್ಹೊತ್ತಾಗತ್ತೆ!

## ದೃಶ್ಯ ೩

[ಸರೋಜ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತಿರುವಳು. ರಮಾಬಾಯಿ ನಿಧಾನವಾಗಿ ಪ್ರವೇಶ.]

**ಸ :** (ಎದ್ದು, ಸಣ್ಣಧ್ವನಿಯಲ್ಲಿ) ಬನ್ನಿ ರಮಾಬಾಯಿ.

**ರ :** (ಅವಳೂ ಮೆಲ್ಲಗೆ) ಯಾಕ್ರೀ ಸರೋಜ ಸಪ್ಪಗಿದೀರಿ ?

**ಸ :** ನೀವ್ರೋ ? ನಿಮ್ಮುಖವ್ನೂ ಡಿಟ್ಟೋ. ಹರಳೆಣ್ಣೆ ಕುಡ್ದೋರ್ಹಾಗಿದೀರಿ ?

**ರ :** ........ ಏನೋ ........ ಈ ಊಟ ತಿಂಡೀದು........

**ಸ :** ಹುಂ ! ............ನೀವೂ ನನ್ನೇಚಾಟಕ್ಕೇ ಸಿಕ್ಕೊಂಡಿದೀರಿ ಅನ್ನಿ ಹಾಗಾದ್ರೆ ? ............ಏನೋಪ್ಪ, ನಾವ್ಮಾಡ್ಕೊಂಡಿದ್ದು, ನಮ್ಮುತ್ತಿಗ್ಗೆ ನಾವೇ ನೇಣ್ಹಾಕೊಂಡ್ಹಾಗಾಯ್ತು !

(ಧರ್ಮಾಂಬ ಕೈ ಅಲ್ಲಾಡಿಸುತ್ತಾ ಗೊಣಗುತ್ತಾ ಪ್ರವೇಶ.)

**ಧ :** ಬಿದ್ವು, ಅಳ್ಳಕ್ಕೆ ಬಿದ್ವು !

**ಸ: ರ :** (ಇಬ್ಬರೂ)—ಯಾಕ್ರೀ, ಏನ್ರೀ ಧರ್ಮಾಂಬ ಅದು ?

**ಧ :** ಅಲ್ರೀ, ಅದೇನ್ಸುಡುಗಾಡು ಶರ್ಮೋಲ್ರೀ ಆ ಬಾಕಶಾಲೇದು ? ಒಂದು ವರವಲ್ ಇಲ್ಲ, ಒಂದು ಕೂಟ್ಟು ಇಲ್ಲ, ಅಪ್ಪಲ ಊರ್ಗಾಯ್ ಮುದಲೇ ಇಲ್ಲ ! ಬೆಳಗ್ಗೆ ಒರು ಕೊಳಂಬು, ಸಾಯಂತ್ರ ಶಾರು, ಪಲ್ಯ. ಬೇಜಾರಾಗಿವಿಡತ್ರಿ. ನಮ್ಮ ವೀಟ್ಕಾರು........

**ರ :** (ಮಧ್ಯೆಬಾಯಿಹಾಕಿ) ನಿಮ್ವೀಟ್ಕಾರು ಹಾಗಿರ್ಲಿ. ನಮ್ಮನಿಯಾಗೆ ದೊಡ್ಡ ರಂಪ ರಾದ್ಧಾಂತ ಶುರೂ ಆಗಿದೆ. ನಮ್ಮೆಜಮಾನ್ರಿಗೆ ಸೌತೇಕಾಯಿ ಭಟ್ಣೆ ಮತ್ತು ಫಳಿದ್ಯ ಅಂದ್ರೆ ಭಾಳ ಇಷ್ಟ. ಮೂರ್ಹಿನ ಕ್ಕೊಂದ್ಸಾರಿ, ಎರಡ್ರಲ್ಲೊಂದು repeat ಆಗ್ದೇ ಇದ್ರೆ, ನನ್ಮೇಲೆ ಮುನಿಸಿ ಕೊಂಡು ಮೂದಲಿಸಕ್ಕಾರಂಭಿಸೋರು. ಅಂದಮೇಲೆ, ಈ ಹದಿನೈದು

ದಿನದಾಗೆ ಅವರ ಹಾರಾಟ ಮನೀಲಿ ಎಷ್ಟಾಗಿರ್ಬಹುದು, ಯೋಚಿಸ್ರೀ! ಮಾತಾಡ್ಸಿದ್ರೆ, ಹಾವು ಸೆಣಸ್ದಾಂಗೆ ಬುಸುಗುಟ್ಟುತ್ತಾರೆ. (ಕಣ್ಣೊರಸಿ ಕೊಳ್ಳುತ್ತ) ನಗತ್ನಗ್ತಾ ಇದ್ದ ನಮ್ಮನೀ ಈಗ ನರ್ಕಾ ಆಗದೆ!

ಸ: ನಮ್ಮನೇಲೂ ಅದೇ ಗತಿ ಕಣ್ರೀ! ಅಪ್ರೆಷ್ಟೋ ಸಭ್ಯಸ್ಥರೇನ್ನಿ! ಅಂಥಾವ್ರೂ ಕೂಡ, "ಹಾಳಡ್ಗೆ, ತಕ್ಷೇಲ್ತೂಗ್ತಾಕ್ದಾಗೆ ಸಾಮಾನ್ಯಾಕೆ ಬೇಯಿಸ್ತಾನೆ. ಒಂದಿನ ಉಪ್ಪೋ ಹುಳಿಯೋ ಹೆಚ್ಚಾಗಾದ್ರೂ ಹಾಕ್ಬಾರ್ದೇ? ಬೇರ್ಬೇರೆ ರುಚಿ ಇದೆ ಪ್ರಪಂಚದೊಳಗೆ ಅನ್ನೋದೇ ಮರ್ತುಹೋಗ್ತಾ ಇದೆ ಬಾಯ್ಗೆ!" ಅಂತ ಹಾರಾಡಕ್ಕಾರಂಭಿಸ್ಬಿಟ್ಟಿದ್ದಾರೆ!..........ಇಲ್ಲಿದ್ರೀ ತಾನೇ, ಅವನ್ಗೇನಡ್ಗೆ ಬರತ್ರೀ? ಮೊದಲೇ ಹೇಳ್ದೆ ನಾನು, ಸೀನಪ್ಪನ್ನ ಅಡಿಗ್ಗೊತ್ಮಾಡಿ ಅಂತ, ಒಬ್ಬರೂ ಕಿವೀಗ್ಹಾಕ್ಕೋಳ್ಳಿಲ್ಲ!

ಧ: ಶರಿ ಶರಿ, ಎಂಬ ನಾಣ್ಯರ್ಯ್ಯರ್‌ನೆ ಗೊತ್ಮಾಡಿದ್ರೆ ತೆಳೀತ್ತಿತ್ತು ಶರ್ಮೋಲ್ರುಜಿ! ಎಂಬ ವೀಟ್ಕಾರ್ರು ಎತ್ತನೆಯೋ ಹೇಳಿದ್ರು, ಆದ್ರೂ....

ರ: (ಮುಖ್ಯೆಬಾಯಿಹಾಕಿ) ಸುಮ್ಮನಿರ್ರಿ, ನಿಮ್ಮ ಸೀನಪ್ಪನೂ ಇಲ್ಲ, ನಿಮ್ಮ ನಾಣ್ಯರ್ಯ್ಯರ್‍ರೂ ಇಲ್ಲ, ನಮ್ಮ ಕೊಠಡಿ ಕ್ರಿಷ್ಣಾಚಾರ್ರಿಗೆ ಒಪ್ಪಿಸ್ಬಿಟ್ಟಿದ್ರೆ ನಿಮ್ಮೆಲ್ರ ಬಾಯಲ್ಲೂ ನೀರೂರಿರೋದು ಇಷ್ಟೊತ್ತಿಗೆ! ಅದ್ಬಿಟ್ಟು, ಈ ಗಂಡಸ್ರು, ಗಜಾನನ ಭವನದ ಗುಜರಾತೀ ನಳಪಾಕಕ್ಕೆ arrange ಮಾಡ್ಬಿಟ್ಟಿದಾರೆ;

(ಶಾರದಮ್ಮ ಅಳುತ್ತಾ ಪ್ರವೇಶ)

ಸ: ರ: ಧ: (ಒಟ್ಟಿಗೆ) ಯಾಕ್ರೀ, ಶಾರದಮ್ಮ? ಹೀಗಳ್ತಿದೀರಿ? ಯಾಕ್ರೀ?

ಶಾ: (ಅಳುತ್ತ) ಅಯ್ಯೋ ಏನ್ಹೇಳಲ್ರೀ? ಹೆಂಗ್ಸಾಗ್ಹುಟ್ಟಿ, ಅಡ್ಗೆ ಬೇಯ್ಸ್ಕೀನಾಯ ಪಟ್ಕೊಂಡು, ತಲೇ ಮೇಲ್ಕಲ್ಹಾಕ್ಕೊಂಡೆ ಕಣ್ರೀ!

(ಸ, ರ, ಧ ಎಲ್ಲರೂ ಹಾ! ಎನ್ನುತ್ತಾ ಅವಳ ತಲೆ ಮುಟ್ಟಿ ನೋಡಹೋಗುವರು.)

**ಶಾ :** ನನ್ನ ತಲೆ ವಡೀಲಿಲ್ರೀ, ಹಾಗಾದ್ರೂ ಆಗಿದ್ರೆ ಎಷ್ಟೋ ಚೆನ್ನಾಗೆ ಇತ್ತು. ಕಮಲೂ ವಿಷಯ ಕಣ್ರೀ.

**ಸ :** ಏನಾಯ್ತು ಕಮ್ಲೂಗೆ ?

**ಶಾ :** ಕಮ್ಲೂಗೇನಾಗಿಲ್ಲ ಸದ್ಯ, ಕಲ್ಗುಂಡಾಗಿದಾಳೆ.......ಅಲ್ಲಾ ನೋಡ್ರಿ ವೊನ್ನೆ ವಿಚಿತ್ರ ದುರ್ಗದಿಂದ ವರಾ ಬಂದಿತ್ತು ಈ ಮಹರಾಯ್ತೀನ ನೋಡೋಕ್ಕೆ. ನಾನಂದೆ ಕಾಗದಾಬರ್ತಾಲೆ ಇವರ್ಕೈಲಿ, “ಸರಿ, ಕಂಡೇ ಇದೆ. ಕಮ್ಲೂ ಕೋರೆ ಹಲ್ಲು, ಕೃಷ್ಣವರ್ಣ ಕಾಣ್ತಾಲೇ, ಇದ್ವರ್ಗೂ ಬಂದ್ಹೋದ ಇಪ್ಪತ್ತೊಂದು ವರಗಳ್ಹಾಗೆ, ಈ ಇಪ್ಪತ್ತೆರಡ್ನೇ ವರಾನೂ ನಮ್ಮಪ್ಪ ಅಮ್ಮನ್ಕೇಳಿ ಕಾಗ್ದ ಹಾಕಿಸ್ತೀನಿ ಅಂತ್ಲೋ ಇಲ್ಲ ನನ್ನಕ್ಕತಂಗೀರೊಪ್ಪಿಗೆ ಆಗ್ಬೇಕೂಂತ್ಲೋ ಪೂಮೂಲ್ಕೋಬಾನೆ ಹಾಡಿ ಹೋಗ್ತಾನೆ” ಅಂತ........ಸರಿ, ಊರಿಗ್ಬಂದ ಹುಡ್ಗ. ಯಥಾ ವಿಧಿ ಹುಡ್ಗೀನೋಡಿದ್ದಾಯ್ತು........ನೋಡ್ಕೋನೇ ರಂಭೇನೋ ಊರ್ವಶೀನೋ ಕಂಡೋನ್ಹಾಗೆ, ಹಿಗ್ಗಿ ಹಿರೇಹೂವಾಗಿ, ಭಾವೀ ಪೂವನ್ಬೆನ್ನಟ್ಟಿ, ಬಾಯಿ ಬಿಡೋದೇ! ನಸ್ಸಂತೋಷ ಎಷ್ಟರ ಮಟ್ಟಿಗ್ರಬಹುದು ನೀವೆ ಯೋಚಿಸ್ಕೋಡಿ. ಕಮ್ಲೂನೂ ಮೆಚ್ಕೋನಿದಾನೆ ಪೃಥ್ವೀಲಿ ಅಂತ ಅರಳಿದೆ. ಹುಡುಗ ನೋಡಿದ್ರೆ, ಲಕ್ಷಣವಾಗಿದಾನೆ; ನೂರಿಪ್ಪತ್ರೂಪಾಯಿ ಸಂಬ್ಳ. ........ಮಗಳ್ಮದ್ವೇ ಮಾಡಿ ಮತಾಪ್ಪಲರ್ ಸೀರೆ ಉಡ್ಗೆರೆ ಉಟ್ಟ ಕನಸ್ನೂ ಸಹ ಕಂಡೆ! (ಮೆಲ್ಲನೆ—ನನಗ್ಮತಾಪ್ಪಲರೂ ಅಂದ್ರೆ ಬಲು ಇಷ್ಟ ಕಣ್ರೀ ಯಾವಾಗ್ಲೂ !)........ಸರಿ, ಮನೇಲೇನು ಅಡಿಗೆ ಊಟ ಇಲ್ವಲ್ಲ. ಪಾಕಶಾಲೇಲೇ ಊಟ ತಿಂಡಿ ಎಲ್ಲಾ ಆಯ್ತು ಭಾವೀ ಅಳಿಯನಿಗೂ........ಮಾರ್ನೆ ದಿನ ಬೆಳಿಗ್ಗೆ ಎದ್ನೋಡಿದ್ರೆ ಚೀಲಛತ್ರಿ ಸಮೇತ ಆಸಾಮಿ ಪರಾರಿ! ರೂಮ್ನಲ್ಲೊಂದು ಕಾಗ್ದ ಬರೆದಿಟ್ಹೋಗಿದಾನೆ ನಮ್ಮೆಜಮಾನ್ರಿಗೆ.

**ರ: ಸ: ಧ :** ಏನ್ಬರ್ದಿದಾನ್ರೀ ?

**ಶಾ :** ಏನ್ಬರ್ದಿದಾನ್ಯೇ !........ಕಾಗ್ದಾನೇ ಓದ್ತೀನ್ಕೇಳಿ.

(ಓದುವಳು)

“ನೀವು ಫುಡ್ ಆಫೀಸಿನಲ್ಲಿದ್ದೀರಿ ಎಂದು ತಿಳಿಯಿತು. ನಾನೂ, ಚಿಕ್ಕಂದಿನಲ್ಲಿ ರವೆ ಸಕ್ಕರೆ ತಿಂಡಿ ತಿಂದ ಸವಿನೆನಪು. ನಿಮ್ಮ ಹೆಣ್ಣನ್ನು ಮಾಡಿ ಕೊಂಡರೆ, ಆ ಸವಿಗನಸು ನನಸಾದೀತು, ರವೆ ಸಕ್ಕರೆ ತಿಂಡಿ ಧಂಡಿಯಾಗಿ ಸಿಕ್ಕೀತು, ಸಣ್ಣಕ್ಕಿ ಅನ್ನ ಬೆಣ್ಣೆ ಕಾಸಿದ ತುಪ್ಪವೆದ್ದೇನು ಅನ್ನುವ ಆಸೆಗೆ ನಿಮ್ಮ ಶೂರ್ಪಣಖೀ ಕುಮಾರ್ತಿಯನ್ನು ಮೆಚ್ಚಿದೆ. ನೀವು ಹಾಕಿದ್ದು ನೋಡಿದರೆ, ಆನೆಭೋಗ, ಕುದುರೆಸಣ್ಣ, ಕುಸುಬಲಕ್ಕಿ ಎಲ್ಲಾ ಬೆರಕೆ ಅನ್ನ —ನಾವಾದರೂ ಒಂದೊಂದೇ ಬೇರೆ ಬೇರೆ ತಿನ್ನುತ್ತೇವೆ—ತಿಂಡೀ ನೋಡಿದರೆ ಒಡೆ, ಬೋಂಡ, ಖಾರಶೇವೆ, ಓಂಪುಡಿ. ಯಥಾಪ್ರಕಾರ ಕಡ್ಲೆಬೇಳೆ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು! ಸಾಕು ಒಂದು ದಿನದ ನಿಮ್ಮ ಆತಿಥ್ಯವೇ, ನಿಮ್ಮ ಮುದ್ದು ಮಗಳು ನಿಮ್ಮ ಮನೆಯಲ್ಲೇ ಇರಲಿ..........” ಕೇಳಿದ್ರೇನ್ರೀ? ನಾನ್ಮಾಡ್ಕೊಂಡದ್ದು ನನ್ನಪ್ರಾಣಕ್ಕೇ ಬಂತಲ್ರೀ? (ಅಳುವಳು)

## ದೃಶ್ಯ ೪

(ಇಬ್ಬರು ಅತ್ತೆಯರ ಪ್ರವೇಶ)

**ಮೊ ಅ:** (ನಗುತ್ತಾ) ನೋಡಿದ್ರಾ ಈ ನಯನಾಶೀರ ನಾಗರೀಕ ಯಾವ ಗತೀಗಿಳೀತು? ಒಬ್ಬೊಬ್ಬ ಮನೇಲೂ ಒಂದೊಂದು ತರಹ ಪೀಕಲಾಟ ಪ್ರಾರಂಭವಾಯ್ತು! ಜೊತೇಗೆ ಎರಡ್ಕೊತ್ತೂ ಕೆಲಸ್ವಿಲ್ದೆ, ಅಲ್ಲಿ ಇಲ್ಲಿ ಆ ಅಂಗ್ಡಿ ಈ ಅಂಗ್ಡಿ ಅಲೆದು, ಕೈಗ್ಳೂ ಒರೀದಾದ್ವು. ಥಣ್ಣಗಾಯ್ತು

ಇವರ್ಮುಣೆತ ! ಮುಖಗಳ್ಮೂರ್ಕ್ಯಾಸಾಗಿ ಕೂತಿದಾರೆ...........ಅಲ್ಲಾ ಮಹಿಳಾ ಸಮ್ಮೇಳ್ನ ಮಾಡ್ದ ಹಿರಿಯರು, ಕೆಲ್ಸಕಾರ್ಯಕ್ಹೋಗೋ ಹೆಂಗಸ್ರಿಗಸ್ಕೊಲ್ವಾಗ್ಲೀಂತ ಈ ಪಾಕಶಾಲೆ ಏರ್ಪಾಡ್ನ ಸೂಚಿಸಿದ್ರಂತೆ. ಈ ಹುಡ್ಗೀರ್ಸೇರ್ಕೊಂಡು, ತಮ್ಮಂಥಾ ಸಂಸಾರ ಮಾಡೋ ಹೆಂಗಸ್ರಿಗೇ ಅದನ್ನ ಪ್ರಯೋಗಿಸ್ಕೊಂಡ್ಬಿಡೋದೇ !

ಎ. ಆ : ಹಾಗೇನು? ಅಷ್ಟಲ್ದೆ, ಸ್ತ್ರೀ ಬುದ್ಧಿ ಪ್ರಳಯಾಂತಕ ಅಂತ ಯಾಕೆ ಹೇಳಿದ್ರು ಮತ್ತೆ !........ಹೂಂ....ಹೋಗ್ಲೇಳಿ ! ನಮ್ಗೂ ಹದಿನೈದು ದಿನ ಹಾಳು ಹರಿತಿಂದು ಹರಣ ಮಾಡೋದು ಹಣೇಲಿ ಬರೆದಿತ್ತು !.... ಎಲ್ರೂ ನಿನ್ನೆ ಸಭೆ ಸೇರಿ, "ಸಾಕು ಈ ಸಾಮೂಹಿಕ ಪಾಕ್ಶಾಲೆ ಸಹವಾಸ; ಗಂಡಂದ್ರು ಕೈಬಿಟ್ಹೋಗೋ ಗತಿ ಬಂದಿದೆ, ಮಕ್ಳು ಮನೆ ಬಿಟ್ಹೋಡ್ಹೋಗೋ ಗತಿ ಬಂದಿದೆ" ಅಂತ ಗೋಗರ್ದು ಮುಚ್ಚಿ ಸ್ಬಿಟ್ರಂತೆ ! ನಾಳ್ನಿಂದ, ಮನೇಲೇ ಅಡ್ಗೆ ! (ಇಬ್ಬರೂ 'ಹಹಹಹ' ಎಂದು ನಗುವರು.)

ಮೊ. ಅ : . ಬನ್ನಿ, ಗುಡಿಗ್ಹೋಗಿ ಗಣಪತಿಗೊಂದು ಕಾಯನ್ನಾದ್ರೂ ಒಡಸ್ಕೊಂಡು ಬರೋಣ. (ಹೋಗುವರು)

## ದೃಶ್ಯ ೫

[ಸರೋಜಳ ಪತಿ ಊಟಮಾಡುತ್ತ ಕುಳಿತಿರುವನು. ಸರೋಜ ಬಡಿಸುತ್ತಿರುವಳು.]

ಸ : ಹೇಗಿದೇಂಪ್ರೆ ಅಡಿಗೆ ?

ಪ : ಸೊಗ್ಸಾಗಿದೆ ! ಹದಿನೈದು ದಿನದಿಂದ ರೂಢಿ ತಪ್ಪಿ........ಬಜ್ಜಿ ಬದ್ನೇ ಕಾಯಿ ಸ್ವಲ್ಪ ಸೀಕು, ಹುಳ್ಹೀವ್ಗೆ ಕೊಂಚ ಉಪ್ಪು ಮುಂದೂನ್ನು

...........ಆದರೂ ಮೃಷ್ಟಾನ್ನ ಭೋಜನ ಸರೋಜ ಇವತ್ತೆಂದು ! ತ್ಚು ತ್ಚು ತ್ಚು ತ್ಚು ! ಮೃಷ್ಟಾನ್ನ ಭೋಜನ ! ಭೇಷಾಗಿದೆ !

(ತೆರೆಯಲ್ಲಿ ಮಾತಿನ ಸದ್ದು)

**ಸ :** ಇರೀಂದ್ರೆ, ರಮಾಬಾಯಿ ಮನೇಲೇನೋ ಮಾತಾಗ್ತಿದೆ ! (ಇಬ್ಬರೂ ಕಿವಿಗೊಡುವರು)

[ತೆರೆಯಲ್ಲಿ]

**ರಮಾಬಾಯಿಯ ಪತಿ :** ಹ ಹ ಹ ಹ! ಹೆಂಗಿದೆ ರಮಾ ಇವತ್ತು ನಿನ್ನ ಕೈವಾಡ ! ಸೌತೇಕಾಯಿ ಛಟ್ನಿ–ಬರೀ ಛಟ್ನೀಲೇ ತಿಂದ್ಬಿಡೋಣ ಅನ್ನಿಸ್ತದೆ ! ಘಳಿದ್ಯ ನೋಡಿದ್ರೆ–ಘರಮಾಯಿಷಿ ! ಯಾವದ್ತಿನ್ಲಿ, ಯಾವದ್ಬಿಡ್ಲಿ ! ಆ........?

**ರ :** ಹಂಗೇ, ನಾನಡಿಗೆ ಮಾಡಿದ್ರೆ !....(ಮೆಲ್ಲನೆ) ಅಲ್ರೀ....ಸಾಯಂಕಾಲ ........'ಜೀವನ'ಕ್ಕೆ ಕರ್ಕೊಂಡ್ಹೋಗ್ಬಾರ್ದಾ........?

**ಪ :** ಹುಂ ! ಬೀಸ್ದೆ ಬಲೀನ ! ಬೀಸ್ದೆ, ನನ್ನ ಬಯಕೆ ಅಡಿಗೇನ ಒಡ್ತೀ ಆ ?........ (ನಗುವನು)

(ಮತ್ತೊಂದು ಪಾರ್ಶ್ವದ ತೆರೆಯಲ್ಲಿ ಮಾತಿನ ಸದ್ದು)

**ಸರೋಜಳ ಪತಿ :** ಅಲ್ನೋಡು, ಅಯ್ಯರ್ ಮನ್ಲೂ ಏನೋ ವಾಗ್ವಾದ ನಡೀತಿರೋಹಾಗಿದೆ ! (ಇಬ್ಬರೂ ಕಿವಿಗೊಡುವರು).

(ತೆರೆಯಲ್ಲಿ)

**ಐಯ್ಯರ್ :** [ಧರ್ಮೂ, ಶ್ರೇಷ್ಠಮಾ ಶಮೀಲ್ ಇಣ್ಣಿಕಿ ! ಹ ಹ ಹ ಹ ! ರೊಂಬ ನನ್ನ ಇರ್ಕಿದೀ. ಅಪ್ಪಲ, ವರುವಲ್ ಇಲ್ಲಾದೆ ಶತ್ತು ಪೋಯಿರಂದೆ ನಾನ್ ಇತ್ತನ್ನಾಳಿ ! ಆಹಾ ! ಕೂಟ್ಟುಕರಿ, ಪಚ್ಚಡಿ ಉತ್ಕೃಷ್ಟಮಾ ಇರ್ಕಿಡೀ ಕಣ್ಣೇ !]

**ಧ :** ಅಪ್ಪಡಿಯಾ ! ಎಂಗೆ ಕೆಟ್ಟುಪ್ಪೋಗದೋ ಅನ್ನಿ ಎನಕ್ ಭಯಮಾ ಯಿರಂದದಿ. ಸದ್ದಿಕಿ ನಲ್ಲ ಇರ್ಕಡೇ ! ಅಬ್ಬ !........ (ಮೆಲ್ಲನೆ) ಸಾಯಂತ್ರಂ........ಅಪ್ಪಡಿಯೇ........ರಾಮಲಕ್ಷ್ಮಿ ಹಾಲ್‌ಕಿ........ ಪೋಲಾಮಾ ?....ಅಂದ....ಅಡಿಯಾರ್ ಬಾರ್ಡರ್ ಪೊಡವೆ........

**ಐ :** (ನಗುತ್ತ) ಆಗಟ್ಟುಂ, ಆಗಟ್ಟುಂ, ಶಿನ್ನಾ! ]

**ಸರೋಜ :** ನನಗೇನೂಂದ್ರೆ ಉಡ್ಗಿರೆ ಅಡ್ಗೆ ಮಾಡಿದ್ದಕ್ಕೆ ?

**ಪ :** ನಿಂಗೇ ?....ಸೀರೆ ತೆಕ್ಕೊಡೋಣಾಂದ್ರೆ, (ಬೆರಳೆಣಿಸುತ್ತಾ) ಮೊಗ್ಗಿನ ಸೀರೆ, ಹೂವಿನ ಸೀರೆ, ಮಾವಿನ್ಕಾಯಿ ಬಾರ್ಡರು, ಜೇವಿನ್ಕಾಯಿ ಅಂಚು, ಮೈಸೂರು ಸಿಲ್ಕು, ಮದ್ರಾಸು ಪಾಟ್ಲಿ, ಎಲ್ಲಾ turn ಮೇಲೆ ತಿಂಗಳಿಗೊಂದು ತೆಗೀತಾಲೇ ಇದ್ದೀ ?

**ಸ :** ಎಲ್ಲೋ ? ಜನವರೀಲಿ ಜಾರ್ಜೆಟ್ ತೆಗೆದ್ಕೊಡ್ತೇನೇ ಅಂದ್ರೆ ಜಗ್ಗಿದ್ರಾ ನೀವು ? ನವೆಂಬರ್‌ನ ನೈಲಾನೇ ಕೊನೆ ! ಹೇಳೋದು ನೋಡಿದ್ರೆ........

**ಪ :** Allright, ಪಾಪ, ಅದೊಂದು omission, ಒಪ್ಕೊಂಡೆ........ಸರಿ ಒಡವೇ ಮಾಡ್ಸೋಣಾಂದ್ರೆ, ಸುರೈಯಾ ಸರ, ಭಾನುಮತಿ ಬಳೆ, ನರ್ಗೀಸ್ ನೆಕ್‌ಲೇಸ್, ಮಧುಬಾಲಾ ಮಾಂಗಲ್ಯ, ಎಲ್ಲಾ ತಯಾ ರ್ರಾಗೋಗಿದೆ. ಇನ್ನು........?

**ಸ :** ಸಾಕ್ಸನ್ನಿರಿ. ಎಷ್ಟೆಷ್ಟು ಮಾಡಿಸ್ಕೊಟ್ಟಿದೀನೋ ಅನ್ನೋ ಹಾಗೆ ಕೊಚ್ಕೊಳ್ಳೋದು. ಬಿಡಿ, ನನಗೇನೂ........

**ಪ :** ಬೇಡ ಬೇಡ, ಸಿಟ್ಕೋಬೇಡ ರಾಣೀ...........ಹೋಗ್ಲಿ, ನೀನೇ suggestion ಕೊಟ್ಬಿಡು ಮತ್ತೆ !

**ಸ :** ........ಅದೇ....ಅವತ್ತೇ ಹೇಳಿದ್ನಲ್ಲ....ಆ ಬೆಳ್ಳೀ ಪಾತ್ರೇ ವಿಷಯ....

**ಪ :** ಹಾ ! You have hit it right ! ಪಾತ್ರೆ ಅಂತಾಲೇ ಜ್ಞಾಪಕ ಬಂತು. ಮನೇಲಿ ಪಾತ್ರೆ ಸಾಲ್ದು ಪಾತ್ರೆ ಸಾಲ್ದು ಅಂತಿದ್ಯಲ್ಲ, ಆ ಪಾಕಶಾಲೇ ಹಿತ್ತಾಳೆ ಪಾತ್ರೇನೆಲ್ಲಾ purchase ಮಾಡಿ ನಿನಗೆ present ಮಾಡ್ಬಿಡ್ತೀನಿ ಪ್ರಿಯೇ !

**ಸ :** (ಸಿಟ್ಟನಿಂದ) ಥೂ ! ಹೋಗೀಂದ್ರೇ ! !

— ತೆರೆ —

# ಧೂಪಾವಳಿ ಅಥವಾ ದೀಪಾವಳಿ



ಪಾತ್ರಗಳು :

**ಅಳಿಯ**—ನವನಾಗರಿಕ ತರುಣ

**ಜಹಗೀರ್ ದಾರ್ರು**—ಪದವಿಗೆ ತಕ್ಕ ಉಡಿಗೆ ಧರಿಸಿರುವ ಪ್ರಾಣಿ

**ಜಹಗೀರ್ ದಾರಿಣಿ**—ಒಡವೆಯ ಸಿಲುವು, ದೊಡ್ಡ ಕುಂಕುಮ, ಜರಿಸೀರೆಯ ಮುತ್ತೈದೆ

**ಲಲಿತೆ**—(ಮಗಳು) ನವನಾಗರಿಕ ತರುಣಿ

# ಧೂಪಾವಳಿ

## ದೃಶ್ಯ ೧

[ರಂಗದ ಮೇಲೊಂದು ಕುರ್ಚಿ, ಮೇಜು. ಮೇಜಿನಮೇಲೆ ಕೆಲವು ಪುಸ್ತಕಗಳು. ತೆರೆಯೆಳೆದಾಗ ಅಳಿಯ ತಲೆಯ ಮೇಲೆ ಕೈಹೊತ್ತು ಕುಳಿತಿರುವನು.]

**ಅಳಿಯ:** (ಎದ್ದು ಶತಪಥ ತಿರುಗುತ್ತಾ) – ಸೆಪ್ಟೆಂಬರ್ ಫಲಿತಾಂಶ ಏನೋ ಹೊರಬಿತ್ತು........ ಮಾಮೂಲಿನಂತೆ, ನನ್ನ ನಂಬರ್‌ನ್ನೇ ಮರೆತು ಬಿಟ್ಟಿದ್ರು! ಜೀವ........ಜಿಗುಪ್ಸೆ ಆಗಿಹೋಯ್ತು. ಹಾಳಾಗಿ ಹೋಗ್ಲಿ ಅಂತ, ರೈಲುಕಂಬೀ ಮೇಲೆ ಮಲಗ್ದೆ. ಮಲಗಿದ್ರೆ, ಆರುಘಂಟೇ ತಡವೇ ಅವತ್ತು ಆ ರೈಲು! ಛಳೀಲಿ ಕೊರೆದ್ಹೋಗಿ ಎದ್ದು ಬಂದೆ.... ಲಾರಿ ದಾರಿಗೆ ನಿಂತೆ, ಅಕಸ್ಮಾತ್ ಹಾರನ್ ಮಾಡಿಬಿಡ್ತು ಆ ಹಾಳು ಲಾರಿ. ನನ್ನ ನಸೀಬು! ಕೊನೆಗೆ, ಉರಲು ಸಹ ಹಾಕಿಕೊಂಡೆ, ಹಗ್ಗಾನೇ ಹರಿದ್ಹೋಯ್ತು! ........ಸರಿ, ಯಾಕೋ ಆ ಯಮಧರ್ಮ ರಾಯನಿಗೂ ಕೂಡ ಅಗತ್ಯವಿಲ್ಲ ನನ್ನ ಆಗಮನ ಅಂತ ನಿರ್ಧರ ಮಾಡಿ, ಸುಮ್ಮನಾಗಿ ಬಿಟ್ಟ........ಹುಂ....ಇದ್ದೇ ಇದೆಯಲ್ಲ, ಮರಳಿ ಯತ್ನವ ಮಾಡು, ಮರಳಿಯತ್ನವ ಮಾಡು; ಮಹರಾಯ ಯಾರು ಬರೆದನೋ ಆ ಪದ್ಯಾನ, ನನ್ನಂಥಾವರಿಗೆ ಸರಿಯ್ಯಾಗಿ!................

[ತೆರೆಯಲ್ಲಿ "ಪೋಸ್ಟ್, ಪೋಸ್ಟ್" ಎಂದು ಕೂಗುವ ಸದ್ದು. ಅಳಿಯ ಹೋಗಿ ಕವರ್ ತೆಗೆದುಕೊಂಡು "ಯಾರದಪ್ಪಾ" ಎಂದುಕೊಳ್ಳುತ್ತಾ ಹಿಂದಿರುಗಿ, ಒಡೆದು ಓದುವನು.]

(ವ್ಯಂಗವಾಗಿ ನಗುತ್ತ) ದೀಪಾವಳಿ ಕರೆ! ಮಾವನವರಿಂದ! ಅಕ್ಕರೆಯ ಕರೆ! ಖಂಡಿತವಾಗಿಯೂ, ಅಗತ್ಯವಾಗಿಯೂ ಬಂದೇ ಬರಬೇಕಂತೆ! ........ಏನುಹೋಗೋದೋ ಈ ಮುಖ ಇಟ್ಕೊಂಡು!........(ಪುನಃ ಕಾಗದಾ ನೋಡುತ್ತಾ) .......ಹುಂ........ಇಷ್ಟು ಪ್ರೀತಿಯಿಂದ ಬರೆದಿದಾರಲ್ಲಾ! ಮದಲ್ವರ್ಷ, ಮಾವನವರಿಗೂ, ಮನದನ್ನೆಗೂ disappoint ಮಾಡೋದು ಹೇಗೆ?........ಹೋಗೇಬಿಡ್ಲೇನು?........ಕೈಹಿಡಿದಿರೋದೇನೋ ಕಡಿಮೇ ದರ್ಜೇದಲ್ಲಾನ್ನಿ! ಜೇನಪಟ್ಣದ, ಜಹಗೀರ್ದಾರ್ರ, ಏಕಮಾತ್ರ ಕನ್ನಿಕಾಮಣಿ ನನ್ನ ಸಹಧರ್ಮಿಣಿ ಅಂದ್ಮೇಲೆ....! ಅಮ್ಯಾಲೆ ಆತಿಥ್ಯಕ್ಕೇನೋ ಕಡಿಮೆಯಿಲ್ಲ........ಆ?....ಹೋಗೇ ಬಿಡ್ತೀನಿ. ಜಹಗೀರ್ದಾರ್ರು, ಕಾಳಸಂತೇ ದವೇ ಸಕ್ರೇಗೇನೂ ದರಿದ್ರವಿಲ್ಲ, ಲಕ್ಷಣವಾಗಿ ಅಷ್ಟು ಚಿರೋಟಿ, ಮಂಡಿಗೆ etc ಹೊಡೆದ್ಬರೋಣ. ಇಷ್ಟೇ ಇದೆ ನಮ್ಮ ರಾಮಾಯಣ! (ತೆರೆಯೊಳಕ್ಕೆ ಹೋಗುತ್ತಾ) ಅತ್ತೆ ಮಾವಂದಿರ ಅಕ್ಕರೆಯ ಆದರೋಪಚಾರ, ಜೊತೆಗೆ—ನಾಲ್ಕು ದಿನ ಸರಳಾಂಗಿ ಲಲಿತೆಯ ಸವಿ ಸಾಮಿಪ್ಯ! (ನಗುತ್ತ ಹೋಗುವನು.)

## ದೃಶ್ಯ ೨

[ಜೇನಪಟ್ಟಣದ ರೈಲು ನಿಲ್ದಾಣ. ಒಂದು ಪಾರ್ಶ್ವದಿಂದ ಮುಂದೆ ಜಹಗೀರ್ದಾರ್ರು, ಹಿಂದೆ ಸೂಟ್‌ಕೇಸ್ ಹಿಡಿದ ಅಳಿಯ ಪ್ರವೇಶ.]

**ಜಹಗೀರ್ದಾರ್ :** ದಯಮಾಡಿಸ್ಬೇಕು, ದಯಮಾಡಿಸಬೇಕು ಹೇಗಿತ್ತೋ ಪ್ರಯಾಣ!

**ಅಳಿಯ :** ಅನುಕೂಲ್ವಾಗಿತ್ತು, ಏನೂ.... ...

ಜ: ಅನುಕೂಲ್ವಾಗಿತ್ತೇ! ಏನೂ ತೊಂದರೇ ಇರ್ಲಿಲ್ವೇ. ಸಂತೋಷ ಬಹಾಳ ಸಂತೋಷ. (ಅಳಿಯನ ಕೈನೋಡಿ) ಹಾ! ಎಲ್ಲ! ನಾನು ನೋಡಲೇ ಜೇಡ್ವೇ! ಇಲ್ಲಿ ಕೊಡಿ (ಅವನ ಕೈ ಸೂಟ್‌ಕೇಸ್ ತೆಗೆದು ಕೊಳ್ಳಲು ಪ್ರಯತ್ನಿಸುವರು.)

ಅ: ಇರಲಿ, ಪರವಾಗಿಲ್ಲ, ಅದೇನು ಮಹಾ ಭಾರ, ಇರಲಿ, ಇರಲಿ.

ಜ: (ಕೈಯೆತ್ತಿ) ಛೇ ಛೇ ಛೇ ಛೇ, ಉಂಟೇ ಉಂಟೇ! ನೀವು ಹಿಡಿದು ಕೊಂಡಿರೋದೂಂದ್ರೇನು, ಏನ್ಕಥೆ! ತನ್ನಿ ಇಲ್ಲಿ. ತನ್ನಿ (ಕೈಯಿಂದ ಬಲವಂತವಾಗಿ ತೆಗೆದುಕೊಂಡು, ತೆರೆಯೊಳಕ್ಕೆ ಉದ್ದೇಶಿಸಿ) ತಿಮ್ಮಾ, ಲೋ ತಿಮ್ಮಾ, ತೆಗೆದುಕೊಳ್ಳೋ ಇದನ್ನ, ಗಾಡೀಲಿಡು. (ತೆರೆಯೊಳಕ್ಕೆ ಕೊಟ್ಟು) ನೀವೂ ನಡೀರಿ, ಗಾಡೀಲಿ ಕೂತ್ಕೊಳ್ಳಿ.

ಅ: ಗಾಡಿ?........ಯಾಕೆ?........ನಡದ್ಕೊಂಡೇ

ಜ: ಛೇ ಛೇ ಛೇ ಛೇ ಉಂಟೇ ಉಂಟೇ ಉಂಟೇ! ನಡೆಯೋವೇ? ನೀವು? ಹುಡುಗಾಟ. ಕೂತ್ಕೊಳ್ಳಿ ಬನ್ನಿ ಗಾಡೀಲಿ.

ಅ: (ಎರಡು ಹೆಜ್ಜೆ ಹಿಂಬಾಲಿಸಿ, ಅನುಮಾನದಿಂದ) ಯಾವ್ಗಾಡಿ?........ಎಲ್ಲಿದೆ?

ಜ: (ತೆರೆಯೊಳಕ್ಕೆ ತೋರಿಸುತ್ತ) ಅಗೋ, ಅಲ್ಲೀ ನಿಂತಿದ್ಯಲ್ಲಾ.... ...ನಿಮ್ಗೋಸ್ಕರವೇ ಕಾದಿರೋದು ಅದು ಆಗಿನಿಂದ. ದಯಮಾಡಿಸ್ಬೇಕು.

ಅ: (ಬೆಚ್ಚಿ) ಆ'......ಆ ಗಾಡೀನೆ? ಅಮ!! ([illegible] ತಲೆದೂಗುವರು) ಆ ಜೋಡಿ ಕುದುರೆ ಸಾಹೋ[illegible]! ([illegible] "ಹೂ ಹೂ ಅವೇ ಅವೇ" ಎಂದು ಪುನಃ ತಲೆ ಅಲ್ಲಾಡಿಸುವರು.)

(ಸಭಿಕರ ಕಡೆ ತಿರುಗಿ) ಸುತ್ತ ಜರೀಪರದೆ, ಒಂದು ಕಿಂಡಿ ಸಹ ಇಲ್ಲದ ಘೋಷಾ ರಥ! ಶುದ್ಧ ಪಾಕೀಸ್ತಾನದ ಬಾಬ್ತು! (ಮಾವನವರ ಕಡೆ ತಿರುಗಿ) ಅಯ್ಯಯ್ಯೋ, ಗಾಡಿ ಬೇಡಿ. ನಾನು ನಡಕೊಂಡೇ....

ಜ: ಛೇ ಛೇ ಛೇ ಛೇ ಉಂಟೇ ಉಂಟೇ! ಸಂಜೇ ಹೊತ್ನೊ, ಮಂಜಿನ ಮುಚ್ಚಂಜೆ, ಥಂಡಿಗಾಲ, ಹಿಮದ ಹಾವಳಿ!.... ಬನ್ನಿ ಬನ್ನಿ........ (ಎನ್ನುತ್ತ ಅಳಿಯನನ್ನು ದಬ್ಬಿಕೊಂಡು ಹೋಗುವನು. ಅಳಿಯ ಅಳುಮುಖದಿಂದ ಹಿಂಬಾಲಿಸುವನು).

## ದೃಶ್ಯ ೩

[ಜಹಗೀರ್‌ದಾರ್ರ ಮನೆ. ತೆರೆ ತೆಗೆವಾಗ ಸರ್ವಾಲಂಕಾರ ಭೂಷಿತೆಯಾದ ಜಹಗೀರ್‌ದಾರಿಣಿ ಪ್ರವೇಶಿಸಿ, ಎದುರುಗಡೆ ಬಗ್ಗಿ ನೋಡುತ್ತಾ]

**ಅತ್ತೆ**: ಇನ್ನೂ ಬರಲೇ ಇಲ್ವೇ ಗಾಡಿ? ಎಷ್ಟೊತ್ತಾಯ್ತು, ರೈಲ್ ಬಂದಿರಲಾರದೇ!........ (ಸುತ್ತಲೂ ನೋಡಿ) ಎಲ್ಲಾ ಸಿದ್ಧವಾಗಿದೇತಾನೆ! (ತೃಪ್ತಿಯಿಂದ) ಅಡಿಗೇನೂ ಮುಕ್ಕಾಲು ಪಾಲು ಮುಗಿದಿದೆ, (ಪುನಃ ತೆರೆಯೊಳಕ್ಕೆ ನೋಡಿ) ಅಗೋ, ಬಂತು ಗಾಡಿ, ಬಂದೇ ಬಂತು! (ಸಂಭ್ರಮದಿಂದ) ಲೇ ಲಕ್ಷ್ಮೀ, ರಾಜೀ, ಸೀತಾ, ಭಾಗೂ ಏಳಿ, ಎದ್ದು ನಿಂತ್ಕೊಳ್ಳಿ. ಇನ್ನೂ ಬಂದಿಲ್ಲಾಂತ ಅಲ್ಲೇ ಕೂತೇಬಿಡೋದೇ! ಲಕ್ಷಣವಾಯ್ತು. ಏನ್ಹುಡಿಗೀರಮ್ಮ ಈ ಕಾಲ್ದೋರು, ಸೊಂಟವೇ ಭದ್ರವಿಲ್ಲ!—ಅಕ್ಷತೆ ಹಾಕಿ ಬಾಗಿಲಿಗೆ ಬಂದ ತಕ್ಷಣ........ಉಂ........ ಹಾಗೇ....! ಪುಟ್ಟಮ್ಮನೋರೇ, ಹಣೇಗಿಟ್ಟು ಆರತೀ ಎತ್ತಿದ್ರಾ?.... ಉಂ, ಸರಿ....ಇಡಿಗಾಯಿ ಹಾಕೋ ರಾಮೂ....ಉಂ....ಬನ್ನೀಪ್ಪಾ, ಒಳಗ್ಬನ್ನಿ. (ಅಳಿಯ, ಮಾವ ಪ್ರವೇಶಿಸುವರು).

**ಅತ್ತೆ**: ಆರೋಗ್ಯವೇಪ್ಪಾ.

**ಅಳಿಯ**: ಹೂಮ್.

ಅತ್ತೆ : ನಿಮ್ಮ ತಾಯಿ ಅವರೆಲ್ಲ ಚೆನ್ನಾಗಿದ್ದಾರೆಯೇ?...........ಅವ್ರೂ ಬಂದಿದ್ರೆ ಚೆನ್ನಾಗಿತ್ತು.

ಅ : ಎಲ್ಲಿ, ಅವರಿಗೆ ಈ ನಡುವೆ ಮೈಯೇ ಹುಷಾರಿಲ್ಲ.

ಅತ್ತೆ: ಹೌದು, ಬರೆದಿದ್ರಲ್ಲ ಹಾಗಂತ. ಏನೋ ವಯಸ್ಸಾದ ಮೇಲೆ ಹಾಗೇ, ಏನ್ಮಾಡೋದು! ........ಏಳಿ, ಕೈಕಾಲು ತೊಳೆದ್ಕೊಳ್ಳಿ. ಎಷ್ಟು ಹೊತ್ತಿನಲ್ಲಿ ಊಟ ಮಾಡಿದ್ದೋ ಏನೋ!

(ಅಳಿಯ, ಮಾವ ಒಂದು ಪಾರ್ಶ್ವದ ನೇಪಥ್ಯದೊಳಕ್ಕೂ, ಅತ್ತೆ ಮತ್ತೊಂದು ಕಡೆಗೂ ಹೋಗುವರು. ಅಳಿಯ ಕೋಟು ಬೂಡ್ಸು ತೆಗೆದು, ಪೈಜಾಮಾ, ಷರ್ಟ್‌ನಲ್ಲಿ ಹಿಂದಿರುಗುವನು. ಮಾವನೂ ಜೊತೆಯಲ್ಲಿ ಬರುವನು.)

ಮಾ : ಬನ್ನಿ, ಕೂತ್ಕೊಳ್ಳಿ.

ಅ : ತಾವೂ ಕೂತ್ಕೊಳ್ಳೋಣಾಗಲಿ. (ಇಬ್ಬರೂ ರತ್ನಗಂಬಳಿಯ ಮೇಲೆ ಕುಳಿತುಕೊಳ್ಳುವರು.)

ಅತ್ತೆ : (ನೀರು, ತಟ್ಟೆ ತುಂಬ ತಿಂಡಿ ತಂದು ಮುಂದಿಟ್ಟು) ತೆಗೆದ್ಕೊಳ್ಳೀಪ್ಪ. ಎಷ್ಟು ದಣಿದಿದೀರೋ ಪಾಪ! (ತಾನೂ ಒಂದು ಮಗ್ಗುಲಿಗೆ ಕೂಡುವಳು.)

ಅ : ಅಯ್ಯೋ, ದಣಿದಿರೋದೇನಮ್ಮ ಮಹಾ!

ಮಾ : ಛೇ ಛೇ ಛೇ ಛೇ ಉಂಟೇ ಉಂಟೇ! ರೈಲು ಪ್ರಯಾಣಾಂದ್ರೆ ಏನುಸಾಮಾನ್ಯವೇ? ಆ ಬಿಸಿಲೋ, ಆ ನೂಕುನುಗ್ಗಲೋ!........ ತೆಗೆದ್ಕೊಳ್ಳೋಣಾಗಲಿ.

(ತಿಂಡಿ ತಟ್ಟೆಗೆ ಕೈಯಿಟ್ಟು ಲಡ್ಡು ಮುರಿಯುತ್ತಿರುವನು. ಜಹಗೀರ್‌ದಾರ್ರು ಸೊಂಟದಿಂದ ನಶ್ಯದ ಡಬ್ಬಿ ತೆಗೆದು 'ಸೊರ್ರನೆ' ಏರಿಸುವರು. ಅಳಿಯ 'ಅಕ್‌ಶ್‌ಶ್' ಎಂದು ಸೀನುವನು.)

ಮಾ : ಹಾ!

ಅತ್ತೆ : ಅಯ್ಯೋ!

ಅ : ಅಕ್‌ಶ್‌ಶ್‌ಶ್ !

ಅತ್ತೆ: ಅಯ್ಯೋ ಇನ್ನೇನನ್ಗತೀಂದ್ರೇ, ನೆಗಡಿ ಆಗ್ಬಿಡ್ತಲ್ಲಾ !

ಅ : ನೆಗಡಿ........(ಕೈ ಅಲ್ಲಾಡಿಸುತ್ತ, ಮಾತಾಡಲಾರದೆ ಸೀನುವನು).

ಅತ್ತೆ : (ಥಟ್ಟನೆ ಎದ್ದು) ಅಲ್ಲಾಂದ್ರೇ, ಹೀಗೇ ಬಿರುಗಣ್ ಬಿಟ್ಕೊಂಡು ಕೂತಿದೀರಲ್ಲಾ! ಮೊದಲು ಫೋನ್ ಮಾಡಿ ಡಾಕಟ್ರಿಗೆ........ಉಶ್ ........ಚಾಮುಂಡಮ್ಮಾ ಮಹಾತಾಯೀ !

ಅ : ಬೇಡಿ ಬೇಡಿ. ನನಗೆ ನೆಗಡಿ...............(ಮುಂದೆ ಮಾತನಾಡಲಾರದೆ ಸೀನುವನು)

ಮಾ : ( ಪಡಬಡನೆದ್ದು ತೆರೆಯೊಳಗೆ ಫೋನ್ ಮಾಡುವನು ) Hullo hullo ಡಾಕ್ಟರ್.... ? ನಾನು, ಜಹಗೀರ್‌ದಾರ್........ನಮ್ಮ ಅಳಿಯಂದ್ರಿಗೆ ........ಹುಂ............ಈಗತಾನೇ ಬಂದ್ರು............ವಿಪರೀತಿ ನೆಗಡಿ ಆಗ್ಬಿಟ್ಟಿದೆ........ಹುಂ........C.A.Q ನೇ ? ........ ಸರಿ ........mixture ನೂ ಕಳಿಸ್ತೀರಾ ?........ಆ ? ನೀಲಿಗಿರಿತೈಲ ತಿಕ್ಕಲೇ ? .......ಉಂ ........ಸರಿ...... .....ಬೆಳಿಗ್ಗೆ ಬಂದು ನೋಡ್ತೀರಾ ?........ನಮಸ್ಕಾರ "

ಅತ್ತೆ: ಏಳೀಪ್ಪ, ಆ ರೂಮಿಗೆ ನಡೀರಿ....ಹಾಳು ಸೀತ, ಏನು ಗ್ರಹಚಾರವೋ, ಚಾಮುಂಡಮ್ಮ ಮಹಾತಾಯೀ !........(ಅಳಿಯ ಮಾತಾಡಹೋಗುವನು.)

ಮಾತಾಡ್ಬೇಡಿ, ಮಾತಾಡ್ಬೇಡಿ, ಆಯಾಸ್ವಾದೀತು ! (ಸೀನಿನ ಹಾವಳಿಯಿಂದ ಮಾತಾಡಲಾರದೆ, ಅಳಿಯ ಸುಮ್ಮನಾಗುವನು.)

ಮಾ : ಏಳಿ, ಏಳಿ, ಮಲಕ್ಕೊಳ್ಳಿ ! (ಅಳಿಯ ಎದ್ದು, ಅಲ್ಲೇ ಒಂದು ಮಗ್ಗುಲಿನಲ್ಲಿದ್ದ ಮಂಚದ ಮೇಲೆ ಮಲಗುವನು. ಅತ್ತೆ ಹೊದ್ದಿಕೆ ಹೊದಿಸಿ) ಏನು ಹೀಗೆ ನಿಂತಿದೀರಿ ? ಹೋಗಿ, ಇನ್ನೂ ಎರಡು ರಗ್ಗು ತನ್ನಿ !

(ಮಾವ ಎರಡು ರಗ್ಗು ತಂದು ಕವಚುವನು)

('ಇದನ್ನೂ ತೊಟ್ಕೊಳ್ಳಿ' ಎನ್ನುತ್ತ ಮಾವ ಸ್ವೆಟರ್ ತೊಡಿಸುವನು, ಅತ್ತೆ ಮಫ್ಲರ್ ತಂದು 'ಇದನ್ನೂ ಹಾಕ್ಬಿಡಿ' ಅಂದ್ರೇ" ಎನ್ನುವಳು. ಮಾವ ತಲೆಗೆ ಮಫ್ಲರ್ ಸುತ್ತುವನು.)

ಅತ್ತೆ: (ತೆರೆಯುಬಳಿ ಹೋಗಿ) ಲಕ್ಷ್ಮೀ ಲಕ್ಷ್ಮೀ! ಎಲ್ಲಿ, ಒಂದಿಷ್ಟು ಹತ್ತಿ ಕೊಡು. (ತಂದು) ಇದನ್ನ ಕಿವಿಗಿಟ್ಟು ಬಿಡ್ತೀನಿ, ಎಲ್ಲಿ! (ಕಿವಿಗಳಿಗೆ ತುರುಕುವಳು)

ಮಾ: (ತೆರೆಯೊಳಗಿಂದ ಎರಡು ಶೀಶೆ, ಔನ್ಸ್ ಗ್ಲಾಸ್ ತಂದು) ಸ್ವಲ್ಪ C.A.Q. ಕುಡಿದ್ಬಿಡಿ. (ಔನ್ಸ್ ಗ್ಲಾಸಿಗೆ ಬಗ್ಗಿಸಿ ಕುಡಿಸುವನು.)

ಅತ್ತೆ: ನಾನು ಶುಂಠಿ ಕಷಾಯ ಕಾಸಿ, ಕುಡಿಸಿಬಿಡ್ತೇನೆ. ಸೀತ ಹರಿದ್ಹೋಗತ್ತೆ........ಇಗೋ, ಈಗ ತಂದ್ಬಿಟ್ಟೆ. (ಹೋಗುವಳು)

ಮಾ: (ತೆರೆಯ ಕಡೆ ತಿರುಗಿ) ಓಹೋ mixtures ಬಂದ್ಬಿಡ್ತು. ಕಳಿಸೇ ಬಿಟ್ಟಿದಾರೆ ಡಾಕ್ಟ್ರು! (ಹೋಗಿ mixture ತಂದು, ಬಗ್ಗಿಸಿ) ಇದನ್ನೂ ಕುಡಿದ್ಬಿಡೀಪ್ಪಾ! (ಅಳಿಯ ಮೆಲ್ಲಗೆ, " ಇದೂನೇ " ಅನ್ನುವನು.)

ಮಾ: ಕುಡೀರಿ, ಕುಡೀರಿ, ಸಿದ್ಧೌಷದ ನಮ್ಮ ಡಾಕ್ಟ್ರು ಕೊಡೋದು! (ಎಂದು ಬಾಯಿಗೇ ಹೊಯ್ಯುವನು).

ಅತ್ತೆ: (ಒಂದು ಬೆಳ್ಳಿಬಟ್ಟಲು, ಕೆಂಡ ತುಂಬಿದ ಸಣ್ಣ ಒಲೆ ತರುವಳು.) ಕೊಳ್ಳೀಪ್ಪಾ, ಕಷಾಯ ಕುಡಿದ್ಬಿಡಿ ಹಾಯ್ ಅನ್ನಿಸತ್ತೆ! (ಬಟ್ಟಲು ಕೊಡುವಳು, ಅಳಿಯ ಹಿಂಡಿದ ಮುಖದಿಂದ ಕುಡಿಯುವನು.) ಧೂಪ ಹಾಕ್ಬಿಡ್ತೇನೆ. ಹಗೂರವಾಗಿ ಹೋಗುತ್ತೆ. (ಕೆಂಡಕ್ಕೆ ಪುಡಿಹಾಕಿ) ಮುಖ ಹಿಡೀರಿ.... ಹುಂ.... ...ಹಾಗೇ! (ಪತಿಗೆ) ಹಾಕ್ಬಿಡಿ, ಎಲ್ಲಾ ಕಿಟಕೀನೂ........... ಗಾಳೀ ಛಳೀ ಸಧ್ಯ!........ಅಷ್ಟೋ ತೋಚಲ್ವಲ್ಲ ನಿಮಗೆ! (ಅಳಿಯನಿಗೆ) ಬಿಸಿಯಾಗಿ ಮೆಣಸಿನ ಸಾರನ್ನ ಕಳಿಸ್ತೀನಿ, ಉಂಡು ನಿದ್ದೆಹೋಗಿ!.... ........ಏನು ಗ್ರಹಚಾರಾವಮ್ಮಾ ಚಾಮುಂಡವ್ವಾ ಮಹಾತಾಯಿ! (ಅತ್ತೆ ಮಾವ ಹೋಗುವರು. ತೆರೆ ಬೀಳುವುದು.)

## ದೃಶ್ಯ ೪

[ಮಾರನೇ ಬೆಳಿಗ್ಗೆ ಅಳಿಯ ಆಕಳಿಸುತ್ತಾ ಹಾಸಿಗೆಯ ಮೇಲೆ ಕುಳಿತಿರುವನು]

**ಅ :** ಹುಂ, ಅಂತೂ ಉಸಿರು ಸಹಿತ ಉಳ್ಕೊಂಡಿದೀನಿ!........ಅಲ್ಲಾ, ನನಗೆ ನೆಗಡಿ ಅಲ್ಲಾ, ಮಾವನೋರ ನೆಶ್ಯದ ಮಹಾ ಪ್ರಸಾದ ಅಂತ ಹೇಳ್ಕೋಣಾಂದ್ರೆ,, ಕ್ಯಾನಂತೆ ಸಾಲಿಟ್ಟೆ ಹಾಳು ಸೀನುಗಳ ಹಾವಳೀಲಿ ಮಾತಾಡಕ್ಕೆ ಆಗಿದ್ರೆ ತಾನೇ!... ಅಬ್ಬ! ಆ ಒಂದು ತುಣುಕು ನಶ್ಯ ತೀಲಿ, ನನ್ನ ನಾಸಿಕಕ್ಕೆ ಸೇರಿ, ಅದೆಷ್ಟು ಹಾವಳಿ, ಅದೆಷ್ಟು ಹಾನಿ ಮಾಡಿದೇಂತಿನಿ! ಈ ವೇಷ! ಈ ಉಪಚಾರ! (ಸ್ವೆಟ್ಟರ್ ಮಫ್ಲರ್ ಬಿಚ್ಚುವನು)........ಹುಂ........ಇಲ್ದಿದ್ರೆ ತಾನೇ ಹೇಳೋದು ಹೇಗೆ ನಿಮ್ಮ ನೆಶ್ಯದ ಮಹಾತ್ಮೇಂತ! ಎಷ್ಟಾದರೂ ಮಾವನೋರು....ದಾಕ್ಷಿಣ್ಯ.... !

**ಮಾ :** (ಪ್ರವೇಶಿಸಿ) ಎದ್ದಿರಾ?........ಹುಷಾರೇ?

**ಅ :** (ಎದ್ದುನಿಂತು) ಹುಂ. ಹುಷಾರಾಗಿದ್ದೀನಿ. ಇವತ್ತೇನೂ ಇಲ್ಲ........ (ದೇಶಾವಾರದ ನಗೆ ನಗುತ್ತ) ಎಷ್ಟೋ ಮೇಲು!

**ಮಾ :** ತುಂಬಾ ಸಂತೋಷ. ಮುಖ ತೊಳೆದುಕೊಳ್ಳೋಣವಾಗ್ಲಿ.

(ಅಳಿಯ ಒಂದು ಹೆಜ್ಜೆ ಇಡುತ್ತಲೇ, ಅತ್ತೆ ಸರಕ್ಕನೆ ಬಂದು)

**ಅತ್ತೆ:** ಇರಿ ಇರಿ ಇರಿ. (ನೆಲಕ್ಕೆರಡು ಬಟ್ಟೆ ಹಾಸುವಳು) ಇದರ್ಮೇಲೇ ನಡೀರಿ. ಹಾಳು ಸಿಮೆಂಟ್ ನೆಲ, ಏನು ಥಣುವೋ — ಇವರ್ಗೆ ಅವತ್ತೆ ಹೇಳ್ದೆ, ಹಳೇ ಗಾರೆ ಗಚ್ಚೇ ಸಾಕು, ಸಿಮೆಂಟ್ ಹಾಕಿಸ್ಬೇಡಿ ಅಂತ—ಹುಂ, ಕೇಳಿದ್ರೇ ನನ್ಮಾತನ್ನಾ!

**ಅ :** (ಬಟ್ಟೆಯ ಮೇಲೆ ನಡೆಯುತ್ತ ಸಖಿಕರನ್ನುದ್ದೇಶಿಸಿ) ಹೈಸ್ಕೂಲಿನ ಹಳೇ ನೆನಪು, ಡ್ರಿಲ್ಲಿನ ಡೌಲು, ಮರೆತ್ಹೋಗಿತ್ತು. ಈಗ ಜ್ಞಾಪಿಸಿಕೊಳ್ತಿದೀನಿ ಮಾರ್ಚ್ ಮಾಡೋದು! (ತೆರೆಯೊಳಕ್ಕೆ ಹೋಗುವರು. ಅತ್ತೆ ಮಾವಂದಿರು ಹಿಂಬಾಲಿಸುವರು.)

(ಒಂದೆರಡು ನಿಮಿಷಗಳ ನಂತರ ಕೈಗಳನ್ನು "ಉಫ್ ಉಫ್" ಎಂದುಕೊಳ್ಳುತ್ತ ಅಳಿಯನ ಪ್ರವೇಶ.)

ಅ: ಬೆಂದುಹೋಯ್ತಲ್ಲಪ್ಪಾ ಇವರು ಮುಖಕ್ಕೇ ಅಂತ ಕೊಟ್ಟ ನೀರು! ಎಲ್ಲಿ ತಣ್ಣೀರು ಮುಟ್ಟಿ ಬಿಡ್ತಾನೋ ಅಳಿಯಾ ಅಂತ ಬೆಂಗಾವಲಿಗೆ ಭಾವನ್ನೈದ, ಬೆನ್ನಿಂದೆ ಅತ್ತೆಮ್ಮ! ಒಳ್ಳೇ ಗ್ರಹಚಾರಕ್ಕೆ ಬಂತು!

(ಮಾವ ಕಾಫೀ ತರುವನು. ಅಳಿಯ ಮುಟ್ಟಿ "ಬಿಸಿ" ಎಂದು ಹಿಂದೆಗೆಯುವನು. ಅಷ್ಟರಲ್ಲಿ ಅತ್ತೆ ಥಟ್ಟನೆ ಪ್ರವೇಶಿಸಿ)

ಅತ್ತೆ: ಬಿಸಿ ಬಿಸಿ ಕುಡಿದ್ಬಿಡಿ. ಗಂಟಲಿಗೆ ಹಾಯ್ವಾಗಿರುತ್ತೆ. ಕುಡೀರಪ್ಪ. (ಅಳಿಯ "ಹಾ ಹಾ" ಎಂದುಕೊಳ್ಳುತ್ತ ಕುಡಿಯುವನು)

ಅ: ಇನ್ನು ಸ್ವಲ್ಪಹೊತ್ತಿಗೆ.......ಸ್ನಾನ........

ಅತ್ತೆ: ತ್ಚು ತ್ಚು ತ್ಚು ತ್ಚು. ಬೇಡಪ್ಪಾ ಬೇಡ. ಇವತ್ತೆಲ್ಲಾದ್ರೂ ಸ್ನಾನ ಮಾಡೋದುಂಟೇ! ಬೇಡಿ ಬೇಡಿ!

ಅ ಹಾಗಾದ್ರೆ........ಒಂದು ಸುತ್ತು ಊರಲ್ಲಿ........ಹಾಗೇ ವಾಕಿಂಗಾದ್ರೂ ................

ಮಾ: ಛೇ ಛೇ ಛೇ ಛೇ, ಉಂಟೇ ಉಂಟೇ ಉಂಟೇ! ನೆಗಡಿ ಆಗಿರ್ವಾಗ ........(ತಲೆಯಲ್ಲಾಡಿಸುತ್ತಾ) ತ್ಚು ತ್ಚು ತ್ಚು ತ್ಚು, ವಾಕಿಂಗೂಂದ್ರೇನು, ಹೋಗೋದೂಂದ್ರೇನು!

ಅತ್ತೆ: ಒಂದು ಸುದ್ದಿ ಬೇಡಿ ಇವತ್ತು. ಹಾಯಾಗಿ ಮಲಗಿರೀಪ್ಪ, ಮಲಗಿರಿ....ಚಾಮುಂಡಮ್ಮ ಮಹಾತಾಯಿ! (ಇಬ್ಬರೂ ಹೋಗುವರು)

ಅ: ಹುಂ........ಅಲ್ಲಾ, ಅಲ್ಲಿ ಕಾಣೋ ಕಟ್ಟಡ ಯಾವುದು ಗೊತ್ತೇ? ಜೀನಪಟ್ಟಣದ ಜೈಲು!........ಅಕೋ, ಆ ಕಿಟಕೀ ಕಂಬೀ ಹಿಡಿದುಕೊಂಡು ಹಲ್ಲು ಕಿರೀತಿದಾನಲ್ಲಾ ಖೈದಿ, ಅವನಿಗೂ ನನಗೂ ವ್ಯತ್ಯಾಸ ಏನೂ ಅಂತೀನಿ! ........ಹುಂ, ಏಕ ನಾವೆಯ ನಾವಿಕರು ನಾವಿಬ್ಬರು! ........ಸರಿ, ದಿನಾ ದೂಡೋ ಬಗೆ ಹೇಗಪ್ಪಾ ಇವತ್ತೂ;....ಇನ್ನೇನು

ಕಂಡ್ಹಾಗೇ ಇದೆ, ಆ ಜೈಲ್ ಕಟ್ಟಡದ ಗೋಡೆ ಇಟ್ಟಿಗೆ ಗಣತೀನೇ ಗತಿ !

[ಒಂದು ಪುಸ್ತಕವನ್ನು ತಿರುವಿಹಾಕುತ್ತ ಒಂದೆರಡು ನಿಮಿಷ ಕುಳಿತಿರುವನು. ನಂತರ ಆ ಕಡೆ ಬಗ್ಗಿ ನೋಡಿ]

ಓಹೋಹೋ ! ಹಬ್ಬದ ಏರ್ಪಾಟೇನೋ ಬಲು ಜೋರಾಗಿದೆ ! ಏನು ತೋರಣ, ಏನು ಕಾರಣೆ, ಏನು ಸಾರಣೆ, ಏನು ರಂಗೋಲಿ ! " ಹೊಟ್ಟೇ ಕಡೆ ಲೊಟಪಟ, ಹೊರಗಿನ ನೋಟ ಶೃಂಗಾರ " ಅಂತ !

(ಪುನಃ ಓದುತ್ತಿರುವನು. ಎರಡು ನಿಮಿಷಗಳ ನಂತರ ದೀರ್ಘವಾಗಿ ಉಸಿರೆಳೆದು)

ಅ ಹ ಹ ಹ ! ' ಘಂ ' ಅಂತ ಅಡಿಗೇ ವಾಸನೆ ;........ ಒಳ್ಳೇ ಕೋಸಂಬ್ರಿ ತಯಾರಾಗ್ತಿರ್ಬೇಕು ; ನನ್ನ ಪ್ರಿಯವಾದ ಕೋಸಂಬ್ರಿ ! ........(ಮೂಗೆಳೆಯುತ್ತ) ಭಕ್ಷ್ಯ ಕರೀತಿದಾರೆ ! ಚಿರೋಟಿ ಘಮಲೇ ಅದು !........ಅಬ್ಬ ! ಇವತ್ತಾದ್ರೂ ಹೊಟ್ಟೆ ತುಂಬ ಊಟಹೊಡೀಬೇಕು ; ರಾತ್ರಿ, ಹಾಳು ಮೆಣಸಿನ ಸಾರನ್ನ ನುಂಗಿ ಮಲಗಿದ್ದಾಯ್ತು ಹಣೇಬರಹ !

(ಪುನಃ ಓದುತ್ತಿರುವನು. ಕೆಲವು ನಿಮಿಷಗಳ ನಂತರ ಮಾವ ಬರುವರು.)

**ಮಾ :** ಏಳಿ ಊಟಕ್ಕೆ. ಎಲೆ ಹಾಕಿ ಬಡ್ಸಿದೆ.

(ಅಳಿಯ ಎದ್ದು ಹೊರಡಲು) ಅಯ್ಯಯ್ಯೋ, ಕಾಲಿಗ್ಹಾಕ್ಕೊಳ್ಳಿ, ಕಾಲಿಗ್ಹಾಕ್ಕೊಳ್ಳಿ. ಬರಿಗಾಲ್ನಲ್ಲಿ ನಡೀಬೇಡಿ.

(ರಂಗದ ಒಂದು ಮಗ್ಗುಲಿಗೆ ಹೋದನಂತರ ಅಲ್ಲೇ ಕಾದಿರುವ ಅತ್ತೆ ಎದುರುಗೊಳ್ಳುವಳು.)

**ಅತ್ತೆ :** ಕೂತ್ಕೊಳ್ಳೀಪ್ಪ. ಅಗೋ ಆ ಅಗ್ರದ ಬಾಳೆಲೇಲಿ ಕೂತ್ಕೊಳ್ಳಿ.

(ಅಳಿಯ ಮಾವ ಒಂದು ಮಗ್ಗುಲಿಗೆ ಕೂತುಕೊಳ್ಳುವರು. ಸಭಿಕರಿಗೆ ಅವರ ಬೆನ್ನು ಕಾಣುತ್ತಿರುವುದು. ಅತ್ತೆ ರಂಗದ ಮೇಲೆ ಸಭಿಕರಿಗೆ ಕಾಣಿಸುವಂತೆ ನಿಂತಿರುವರು.)

**ಮಾ :** ಎಲ್ಲಾ ಬಡಿಸಾಯ್ತೇನೇ ?

**ಅತ್ತೆ :** ಹುಂ, ಎಲ್ಲಾ ಬಡ್ಸಿದೆ, ಕೂತ್ಕೊಳ್ಳಿ.

(ಅಳಿಯ ಮಾವ ಊಟ ಮಾಡುವಂತೆ ಕೈ ಆಡಿಸುತ್ತಿರುವರು.)

**ಮಾ :** ಛೇ ಛೇ ಛೇ ಛೇ ಉಂಟೇ ಉಂಟೇ ಉಂಟೇ! ಕೋಸಂಬ್ರೀ ತಿನ್ನಬೇಡಿ............ಬಲು ಸೀತ, ಬಲು ಸೀತ!

..........................................................................................

..........................................................................................

**ಅತ್ತೆ :** ಬೇಡಿ ಬೇಡಿ. ಆಲೂಗಡ್ಡೆ ಪಲ್ಯ ಮಾತ್ರ ಮುಟ್ಟೇರಿ. ವಾಯು.... ಮೊದಲೇ ನೆಗಡೀ ಬೇರೆ!

..........................................................................................

..........................................................................................

**ಮಾ :** ಛೇ ಛೇ ಛೇ ಛೇ ಉಂಟೇ ಉಂಟೇ ಉಂಟೇ! ಮಜ್ಜಿಗೆ ಹುಳೀ ಬೇಡಪ್ಪ, ನೆಗಡೀಗೆ ನೇಣು!

..........................................................................................

..........................................................................................

**ಮಾವ :** ಛೇ ಛೇ ಛೇ ಛೇ ಉಂಟೇ ಉಂಟೇ ಉಂಟೇ! ಚಿರೋಟಿ ಬಡಿಸಸ್ಬೇಡ್ವೇ ಅವರ್ಗೆ. ತುಪ್ಪಾ ತಿಂದು ಪೂರೈಸಬಹುದೇ ಸೀತ ಮುಚ್ಕೊಂಡಿರ್ವಾಗ............?

**ಅತ್ತೆ :** ಅಂದ್ಹಾಗೆ ಹೌದೂಂದ್ರೆ. ಸೀನಪ್ಪಾ ಚಿರೋಟಿ ಹಾಕ್ಬೇಡಪ್ಪ ಅವರ್ಗೆ ................ಹಾಲೇ ಹಾಕ್ಕೊಂಡ್ಬಿಡೀಪ್ಪ. ಮಜ್ಜಿಗೇ ಅನ್ನ ಬೇಡ ................ಸಧ್ಯ, ಚಾಮುಂಡಮ್ಮಾ ಮಹಾತಾಯೀ, ಎಲ್ಲಾದರೂ ಚೆನ್ನಾಗಿಟ್ಟಿರಮ್ಮಾ!

(ತೆರೆಯೊಳಕ್ಕೆ ಹೋಗುವರು. ಒಂದೆರಡು ನಿಮಿಷಗಳ ನಂತರ, ಕೈ ಒರೆಸಿಕೊಳ್ಳುತ್ತಾ ಅಳುಮುಖದ ಅಳಿಯನ ಪ್ರವೇಶ.)

ಅ : ಆಯ್ತು, ಹಬ್ಬದೂಟ ಆಯ್ತು. ಹೊಟ್ಟೇ ಹಸಿದು ಕಾದು ಕೂತಿತ್ತು. ಬಾಯೋ, ಕಾರ್ಕೋಟಕ ವಿಷವಾಗಿ ನಿಂತಿತ್ತು........ಹುಂ, ಅಳಿದುಳಿದ ಅನ್ನಾ ಸಾರ್ನೇ ತುಂಬಿ, ಅತ್ತೇ ಮಹಾರಾಯ್ತಿ ಧಾರಾಳ್ವಾಗಿ ಹಾಕ್ಸಿದ ನಾಲ್ಕೈವರೆ ಚಮಚ ಪಾಯ್ಸ ನೆಕ್ಕಿ, ನೀರ್ಕುಡಿವದ್ದಾಯ್ತು !........ ಆಗ್ಲೇ ಇಬ್ರೂ ಪ್ರೀತಿಯಿಂದ ನೋಟೀಸ್ ಜಾರಿ ಮಾಡಿದಾರೆ. ಮಾವ, ತೈಲ ತೊಡೀತಾರಂತೆ, ಅತ್ತೆ ಧೂಪಾ ಹಾಕಿ ಮತ್ಯಾವದೋ ಕಷಾಯ ಕದಡಿ ಕುಡಿಸ್ತಾರಂತೆ ; ತಯಾರಾಗ್ತಿದೆ !................ (ಔಷಧಿ ಶೀಶೆಯನ್ನು ನೋಡಿ) ಥೂ, ಈ ಹಾಳು ಶನೀನಾದ್ರೂ ಆಚೆಗೆ ಸುರೀತೀನಿ. (ಚೆಲ್ಲುವನು. ನಂತರ, ತಲೆಯ ಮೇಲೆ ಕೈಯಿಟ್ಟುಕೊಂಡು ಮಂಚದ ಮೇಲೆ ಕೂಡುವನು.)

ಸಾಕಪ್ಪಾ ಸಾಕು ಈ ಉಪಚಾರ, ಸಾಕ್ಸಾಕು !........ಊರಿಗಾದ್ರೂ ಹೊರಟು ಹೋಗೋಣಾಂದ್ರೆ, ಹಾಳು ಒಂದೇ ಒಂದು ಆಸೆ ! ಲಲಿತೇನ, ಒಂದ್ಸಾರಿ ಮಾತಾಡಿಸ್ಬೇಕೂಂತ !............ಆ ರಾಮೂಗೆ ಊರಿಂದ ತಂದಿದ್ದ ಬಿಸ್ಕತ್ತು ಪೆಪ್ಪರ್‌ಮೆಂಟು ಲಂಚ ತಿನ್ನಿಸಿ, ಅವರಕ್ಕನ್ನ ಊಟ ಆದ್ಮೇಲೆ ಇಲ್ಲಿ ಬರಹೇಳಬೇಕೂಂತ ಹೇಳಿದೀನಿ. ನೋಡೋಣ. ಅವಳೇನಾದ್ರೂ ಬಂದ್ಬಿಟ್ರೆ............ಈ ಉಪಚಾರವೇ ಸ್ವರ್ಗ !................ (ಪುಸ್ತಕ ಮಗುಚಿ ಹಾಕುತ್ತಾ ಕುಳಿತುಕೊಳ್ಳುವನು. ತೆರೆಯಲ್ಲಿ ಬಳೆಗಳ ಶಬ್ದ)

ಬಂದ್ಳೂಂತ ಕಾಣತ್ತೆ !............ (ಬಗ್ಗಿನೋಡಿ) ಓಹೋ ! ಬಂದ್ಳು, ಬಂದೇ ಬಂದ್ಳು! (ಬೇಗ ಎದ್ದು ನಿಂತು ಕ್ರಾಪಿನ ಕೂದಲುಗಳನ್ನು ಸರಿಪಡಿಸಿ ಕೊಳ್ಳುವನು. ಲಲಿತೆ ತಾಂಬೂಲದ ತಟ್ಟೆ ಹಿಡಿದು, ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತಾ ಬರುವಳು.)

ಅ : (ಹಿಗ್ಗಿನಿಂದ ಅವಳ ಕಡೆಗೆ ಸಾರಿ) ಲಲಿತೇ !

**ಅತ್ತೆ** : (ಥಟ್ಟನೆ ಹಿಂದಣಿಂದ ಪ್ರವೇಶಿಸಿ)—ಅಲ್ಲೇ ಇಟ್ಬುಬಿಡಮ್ಮಾ. ನೆಗಡಿ ಕ್ರಿಮಿಗಳು ಬಹು ಬೇಗ ಅಂಟಿಬಿಡತ್ವೇಂತ ಡಾಕಟ್ರು ಹೇಳಿಲ್ವೇ! ಸಧ್ಯ ನಿನಗೆಲ್ಲಾದ್ರೂ ತಗುಲೀತು ಹಾಳು ಸೀತ! (ಬೆದರಿದ ಲಲಿತೆ ತಟ್ಟೆ ಕುಕ್ಕಿ ಓಡಿಹೋಗುವಳು). ಸಧ್ಯ ಚಾಮುಂಡಮ್ಮಾ ಮಹಾತಾಯೀ! (ಎನ್ನುತ್ತ ತೆರೆಯೊಳಕ್ಕೆ ಹಿಂದಿರುಗುವಳು ಬೆಪ್ಪು ಮುಖ ಬಡಿದ ಅಳಿಯ ಶೂನ್ಯ ದೃಷ್ಟಿಯಿಂದ ನೋಡುತ್ತ ನಿಂತಿರುವನು. ತೆರೆ ಬೀಳುವುದು.)

## ದೃಶ್ಯ ೫

(ಸೂಟ್‌ಕೇಸ್ ಹಿಡಿದ ಸಪ್ಪೇಮುಖದ ಅಳಿಯನ ಪ್ರವೇಶ)

**ಅ** : ಉಸ್! ಸಾಕಪ್ಪಾ ಸಾಕು ಈ ದೀಪಾವಳಿ–ಧೂಪಾವಳಿ, ಸಾಕ್ಸಾಕು. ಇನ್ನೆರಡು ದಿನವೇನಾದ್ರೂ ಈ ಅತ್ತೆಮನೇಲಿದ್ದು ಬಿಟ್ರೆ (ತಲೆತೋರಿಸುತ್ತ) ಪೂರ್ತಿ ಕೆಟ್ಹೋಗ್ಹೋದೇ! (ಶತಪಥ ತಿರುಗುತ್ತ ಜೇಬಿಗೆ ಕೈಹಾಕಿ, ಒಂದು ಕಾಗದವನ್ನು ತೆಗೆಯುವನು). ಹ ಹ ಹ! ಇದೇನು ಗೊತ್ತೇ?........ ಕಾಗ್ದ........ಬೆಂಗ್ಳೂರು ಗೆಳೆಯರಿಂದ!........ನಾನು, ಮಾವನ್ಮನೇಲಿ ಬೆಳೆಸ್ತಿರೋ ಬೊಜ್ಜನ್ನ ತೂಗಕ್ಕೆ ನನ್ನ ವೈದ್ಯ ಮಿತ್ರರು, ಯಂತ್ರ ಸಮೇತ, ಸ್ಟೇಷನಲ್ಲೇ ಕಾದಿರ್ತಾರಂತೆ ........ಕನಿಷ್ಠಪಕ್ಷ ಹದಿನೈದು ಜನ ಬಂದಿರ್ತಾರಂತೆ, ನಾಮುಂದು ತಾಮುಂದೂಂತ ನಾನು ತೆಗೆ

ದ್ಕೊಂಡ್ಹೋಗೋ ತಿಂಡೀಬುಟ್ಟಿ ಇಳಸಲಿಕ್ಕೆ !........ಹ ಹ ಹ ಹ !.... ............ಹ ಹ ಹ ಹ ಹ ಹ !..............ತೆಗೆದ್ಕೊಂಡು ಹೋಗ್ತೀನಿ. ಖಂಡಿತ ತೆಗೆದ್ಕೊಂಡು ಹೋಗ್ತೀನಿ! (ರಂಗದ ಕೊನೆಯುವರೆಗೂ ಹೋಗಿ ಥಟ್ಟನೆ ಹಿಂದಿರುಗಿ) ಏನನ್ನ ಗೊತ್ತೇ ?............**ಮೂರ್ದಿನದ ಗಡ್ಡ ನಾಲ್ಕದಿನಧ ಧೂಳು !!**

— ತೆರೆ —

# ನಮ್ಮ ಪ್ರಕಟಣೆಗಳು

**೧. ನಗ್ನಸತ್ಯ—ಶ್ರೀ ಅ. ನ. ಕೃಷ್ಣರಾಯ.**
ವೇಶ್ಯಾಜೀವನವನ್ನು ಚಿತ್ರಿಸುವ ಕಾದಂಬರಿ. ಬೆಲೆ ೪–೦–೦(ಅಂಚೆ ೦–೮–೦)

**೨. ಶನಿಸಂತಾನ—ಶ್ರೀ ಅ. ನ. ಕೃಷ್ಣರಾಯ.**
ವೇಶ್ಯಾಜೀವನದ ಮತ್ತೊಂದು ಮುಖವನ್ನು ಚಿತ್ರಿಸುವ ಕಾದಂಬರಿ. ನಗ್ನಸತ್ಯದ ೨ನೇ ಭಾಗ. ಬೆಲೆ: ೩–೧೨–೦ (ಅಂಚೆ ೦–೮–೦)

**೩. ಬೆಂಕಿಯ ಬಲೆ—ತ. ರಾ. ಸು.**
ಬಡತನದ ದಾರುಣ ಚಿತ್ರವನ್ನು ರುದ್ರಭಯಂಕರವಾಗಿ ಚಿತ್ರಿಸುವ ಕಾದಂಬರಿ. ಬೆಲೆ: ೨–೧೨–೦ (ಅಂಚೆ ೦–೮–೦)

**೪. ಹೆಣ್ಣಿನ ಬಾಳುಕಣ್ಣೀರೇನೆ?—ಕೈಲಾಸಂ ಕಲ್ಪನೆ.**
ಜ್ಞಾಪಕದಿಂದ ಬರೆದವರು ಶ್ರೀ ಬಿ. ಎಸ್. ರಾಮರಾವ್.
ಗಂಡಸ್ಕತ್ರಿಯ ಎರಡನೆ ಭಾಗ. ಬೆಲೆ: ೦–೧೨–೦.

**೫. ಮರುಗಿ—ಮತಿಘಟ್ಟ ಕೃಷ್ಣಮೂರ್ತಿ.**
ಹಳ್ಳಿಯ ಹೆಣ್ಣೊಂದರ ದುರಂತ ಜೀವನಚಿತ್ರ. ಬೆಲೆ: ೧–೪–೦.

# ನಮ್ಮಲ್ಲಿ ಸಿಕ್ಕುವ ಇತರ ಪ್ರಕಟಣೆಗಳು

**೧. ಅ. ನ. ಕೃ. — ತ. ರಾ. ಸು.**
ಅ. ನ. ಕೃಷ್ಣರಾಯರ ಜೀವನ–ಕೃತಿ ವಿಮರ್ಶೆ.
ಬೆಲೆ: ೩–೪–೦ (ಅಂಚೆ ೦-೮-೦)

**೨. ಅನ್ಯೋನ್ಯ—ಮ. ಶ್ರೀ.**
ಪ್ರೇಮ ಜೀವನದ ಲಘು ಹರಟೆಗಳು. ಬೆಲೆ: ೦–೮–೦

**೩. ಕಾಮಾಕ್ಷಿ—ತ. ರಾ. ಸು.**
ಸೊಗಸಾದ ಸಣ್ಣಕತೆ. ಬೆಲೆ: ೦–೧೨–೦

**ವಿಜಯ ಸಾಹಿತ್ಯ :: ಬಸವನಗುಡಿ :: ಬೆಂಗಳೂರು ೪**

ಇದೇತಾನೆ ಸಿದ್ಧವಾಗಿದೆ

# “ಪ್ರತಿಮಾ”

(ಪತ್ತೇದಾರಿ ಕಾದಂಬರಿ)

ತ್ರಿವರ್ಣ ಮುಖಚಿತ್ರ   ಬೆಲೆ 0-10-0

“ಆದರ್ಶದ ಆಡಂಬರ” ಇತ್ಯಾದಿ ನಾಟಕಗಳನ್ನು ಆಡಬಯಸುವವರು ಪೂರ್ವಭಾವಿ ಅನುಮತಿ ಪಡೆಯಬೇಕು.